

# ಅಮೃತಬಿಂದು

ಬ. ಹೆ. ಶ್ರೀಧರ

ಸಂಯುಕ್ತ ಕರ್ನಾಟಕ ಕಾರ್ಯಾಲಯ - ಹುಬ್ಬಳ್ಳಿ

# ಅಮೃತಬಿಂದು

( ಕವನಸಂಗ್ರಹ )

★

ಬ. ಹೆ. ಶ್ರೀಧರ, ಎಂ. ಎ.

ಶ್ರೀ. ವೆಂ. ಭೀ. ನಾಯಕ, ಎಂ. ಎ., ಎಲೆಲ್. ಬಿ.
ಇವರ ಮುನ್ನುಡಿಯೊಡನೆ

★

೧೯೪೯

ಸಂಯುಕ್ತ ಕರ್ನಾಟಕ ಕಾರ್ಯಾಲಯ
ಹುಬ್ಬಳ್ಳಿ

# ಅನುಕ್ರಮಣಿಕೆ

ಹುಬ್ಬಳ್ಳಿಯ

ಲೋಕಶಿಕ್ಷಣ ಧರ್ಮನಿಧಿಯ ಮೂಲಕ

ಕನ್ನಡ ಜನತೆಗೆ

ಜ್ಞಾನದಾನ ಮಾಡುತ್ತಿರುವ

ಅದರ ಧರ್ಮದರ್ಶಿಗಳಾದ

**ಶ್ರೀ. ರಂಗನಾಥ ದಿವಾಕರರ**

ಕರಕಮಲಗಳಲ್ಲಿ ಸಾದರ ಸಮರ್ಪಿತ

# ಅರಿಕೆ

'ಅಮೃತಬಿಂದು'ವನ್ನು ಸಹೃದಯರ ಮುಂದಿಡಲೆಂದು ಮುನ್ನುಡಿ
ಕಾರರ ಕೈಗೆ ಒಪ್ಪಿಸಲು ಸಂತೋಷವಾಗುತ್ತದೆ. 'ಮೇಘನಾದ'ವಾದ
ಮೇಲೆ ಇದೇ ನನ್ನ ಎರಡನೆಯ ಕವನಸಂಗ್ರಹ. ಇದರಲ್ಲಿರುವ ಕೆಲ
ಕವಿತೆಗಳು ಮೂರು ನಾಲ್ಕು ವರ್ಷಗಳಿಂದ 'ಉಷೆ', 'ಜಯಂತಿ',
'ಕರ್ಮವೀರ', 'ಜೀವನ', 'ಸುಬೋಧ', 'ನರಸಿಂಹ' ಮುಂತಾದ
ಪತ್ರಿಕೆಗಳಲ್ಲಿ ಅಚ್ಚಾದವು, ಕೆಲವು ಸಭೆ ಸಮ್ಮೇಲನಗಳಲ್ಲಿ ಓದಿದವು, ಮತ್ತೆ
ಕೆಲವು ಪ್ರಕಟವಾಗದವು. ವಿಶಿಷ್ಟ ಕಾಲಗಳಲ್ಲಿ ವಿಶಿಷ್ಟಾನುಭವಗಳ
ಪ್ರಚೋದನೆಯಿಂದ ಉದ್ಬುದ್ಧವಾದ ಈ ಭಾವಗಳು ಸಹೃದಯರ ಹೃದ್ಬುದ್ಧಿ
ಗಳ ಸಹಾನುಭೂತಿಗೆ ಪಾತ್ರವಾದಾವೆಂದು ನಂಬಿ ಅವನ್ನು ಬೆಳಕಿಗೆ ತರುವ
ಸಾಹಸಮಾಡಲಾಗಿದೆ.

ಈ ಸಂಗ್ರಹ ಹೊರಬೀಳಲು 'ಸಂಯುಕ್ತ ಕರ್ನಾಟಕ'ದ ಹಿರಿಯರ
ಸೌಹಾರ್ದಬಲವೇ ಕಾರಣ. ಅದರಲ್ಲೂ ಶ್ರೀ. ವ್ಹಿ. ಬಿ. ನಾಯಕ, ಎಂ. ಎ.,
ಎಲ್‌ಎಲ್. ಬಿ. ಅವರ ಅಸ್ಪೃಶ್ಯದೃಶ ಸ್ನೇಹವು ಈ ಪ್ರಯತ್ನ ಪೂರ್ಣವಾಗಲು
ನೆರವಿತ್ತಿತು. ಅದಕ್ಕಾಗಿ ಅವರೆಲ್ಲರಿಗೆ ಮತ್ತು ಹಿಂದೆ ಪ್ರಕಟನೆಗೆ ಅವಕಾಶವಿತ್ತ
ಪತ್ರಿಕೆಗಳಿಗೆ ಈ ಮೂಲಕ ಹೃತ್ಪೂರ್ವಕ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.
ಮುನ್ನುಡಿಯನ್ನು ಬರೆದುಕೊಟ್ಟು ಈ ಪುಸ್ತಕದಲ್ಲಿ ಕಾವ್ಯಪುರುಷನನ್ನು
ವಿಜಯಿಯಾಗೆಂದು ಹರಸಿಬಿಟ್ಟ ಶ್ರೀ. ನಾಯಕರಿಗೆ ಆ ಬಗ್ಗೆ ನಾನು
ಎಂದೆಂದೂ ಋಣಿ. ಪುಸ್ತಕದ ಮುದ್ರಣದಲ್ಲಿ ವಿಶೇಷ ಆಸ್ಥೆಯಿಂದ ಕೆಲಸ
ಮಾಡಿಸಿದ 'ಸಂಯುಕ್ತ ಕರ್ನಾಟಕ'ದ ಮುದ್ರಣಾಲಯದ ವ್ಯವಸ್ಥಾಪಕ
ರಿಗೂ ನಾನು ಆಭಾರಿಯೇ ಸೈ. ಇದನ್ನು ತಮಗೆ ಅರ್ಪಿಸಲು ಅನುಮತಿ
ಯಿತ್ತ ಲೋಕಶಿಕ್ಷಣ ಧರ್ಮಸಿಧಿಯ ಧರ್ಮದರ್ಶಿಗಳಾದ ಶ್ರೀ. ದಿವಾಕರ
ರಂಗರಾಯರ ವಾತ್ಸಲ್ಯದ ಬಗೆಯನ್ನು ಮರೆಯಲಳವಲ್ಲ.

ಹುಬ್ಬಳ್ಳಿ
೧-೪-೧೯೪೯ }

—ಬ. ಹೆ. ಶ್ರೀಧರ

# ಮುನ್ನುಡಿ

'ಕರ್ಮವೀರ' ಪತ್ರಿಕೆಯ ಉಪಸಂಪಾದಕರೂ ನನ್ನ ಪರಮ ಮಿತ್ರರೂ ಆದ ಶ್ರೀ. ಬ. ಹೆ. ಶ್ರೀಧರರ 'ಅಮೃತಬಿಂದು' ವನ್ನು ಕನ್ನಡಿಗರಿಗೆ ಉಣಬಡಿಸುವ ಮಾಣಿಯ ಕೆಲಸವನ್ನು ಮಾಡಲು ನನಗೆ ಬಹಳ ಆನಂದವೆನಿಸುತ್ತದೆ. ಶ್ರೀ. ಶ್ರೀಧರರು ಈಗಾಗಲೇ 'ಮೇಘನಾದ' ವೆಂಬ ತಮ್ಮ ಕವನ ಸಂಕಲನವೊಂದನ್ನು ಕನ್ನಡಿಗರಿಗೆ ಕೊಟ್ಟು ತಮ್ಮಲ್ಲಿರುವ ರಸಿಕತೆಯ ರುಚಿಯನ್ನು ತೋರಿಸಿಕೊಟ್ಟಿರುವರು. ಇದಲ್ಲದೆ, ಆಗಾಗ್ಗೆ ಬೇರೆ ಬೇರೆ ಪತ್ರಿಕೆಗಳು ಕೊಡುತ್ತಿರುವ ಸ್ಥಳ ಹಾಗೂ ಮಹತ್ವ ಇವುಗಳಿಂದಲೇ ಅವರ ಕಾವ್ಯರಸಗಂಗೆಯನ್ನು ಕನ್ನಡಿಗರು ಮೆಚ್ಚಿರುವರೆಂಬ ಅಂಶವು ವ್ಯಕ್ತವಾಗುತ್ತದೆ. ಶ್ರೀ. ಶ್ರೀಧರರು 'ಗದ್ಯಂ ಕವೀನಾಂ ನಿಕಷಂ ವದಂತಿ' ಎಂಬ ಒರೆಗಲ್ಲಿಗೆ ಕೂಡ ಹತ್ತಿದ ಶ್ರೇಷ್ಠ ಗದ್ಯಲೇಖಕರಾಗಿರುವರು. ಆದುದರಿಂದಲೇ ಅವರ ಚಿಕ್ಕಪುಟ್ಟ ಪ್ರಬಂಧಗಳು ಕನ್ನಡದಲ್ಲಿಯ ಅನೇಕ ಪತ್ರಿಕೆಗಳಲ್ಲಿ ಕಾಲಕಾಲಕ್ಕೆ ಪ್ರಕಟವಾಗುತ್ತಿವೆ. ಶ್ರೀಧರರ ಶೈಲಿಯು ಹಾಗೂ ವಿಚಾರಸರಣಿಯ ವೈಶಿಷ್ಟ್ಯಗಳಾದ ಹಳಗನ್ನಡ ಹೊಸಗನ್ನಡಗಳ ಹೊಂದಿಕೆ, ಪ್ರಾಚೀನ ಅರ್ವಾಚೀನ ಅಭಿಪ್ರಾಯಗಳ ಸುಂದರ ಸಮನ್ವಯ ಇವುಗಳನ್ನು ಈ 'ಅಮೃತಬಿಂದು' ವಿನಲ್ಲಿ ವೆಗ್ಗಳವಾಗಿ ಕಾಣಬಹುದು.

'ಕವಿ' ಯೆಂಬ ಪದ್ಯದಲ್ಲಿ 'ಅವನೆಂಥ ಕವಿಯೊ ಅವನೆಂಥ ಕವಿಯೊ' ಎಂದು ಆರಂಭಿಸಿ, 'ಜಗದಂತರಂಗಸೌಂದರ್ಯಮೂರ್ತಿಯನು ಕಡೆದ ಕಲೆಯ ತಂದೆ'; 'ಆ ಶಾಂತಯೋಗಿ, ಗೌರಾಂಗ, ಗೌರಿಗೇ ಶಿಖರವಾಗಿ ನಿಲುವ, ಈಶಾಂತಸಂಗವನು ಕೆತ್ತಿ ಕಡೆದ ಕವಿ ಚೆಲುವರಲ್ಲಿ ಚೆಲುವ' ಎಂದು ತಮ್ಮ ಸಿದ್ಧಾಂತವನ್ನು ಕೊಡುವ ಶ್ರೀ. ಶ್ರೀಧರರ ಅದ್ಭುತ ಕಲ್ಪನಾಶಕ್ತಿಯು ಅತ್ಯಂತ ಪ್ರಶಂಸಾರ್ಹವಾಗಿದೆ. 'ರಾಷ್ಟ್ರಪಿತಾಮಹ' ಎಂಬ ಕವನದಲ್ಲಿ

> "ನುಡಿದಂತೆ ನಡೆವ ನವ ದೇವಮಾನವ ನಮ್ಮ
> ಜಡೆಯಿರದ ತವಸಿ ದಿವ್ಯಾನುರಾಗಿ"

ಎಂದು ಮಹಾತ್ಮಾ ಗಾಂಧಿಯವರ ವ್ಯಕ್ತಿತ್ವವನ್ನು ನಿರಾಡಂಬರ ಸರಲಶೈಲಿಯಲ್ಲಿ ವ್ಯಕ್ತಪಡಿಸಿದ ಅವರ ವಿನೋಕ್ತಿಯಂಥ ಸುಂದರಾಲಂಕಾರಗಳು

ಬಹು ಹೃದ್ಯವಾಗಿವೆ. ' ದೇವನೆಲ್ಲಿಹನು ' ಎಂಬ ಪ್ರಶ್ನೆಗೆ ' ನೀನಿಲ್ಲ ಅಲ್ಲಿ
ಎಂಬ ಪದ್ಯದಲ್ಲಿ ಶ್ರೀ. ಶ್ರೀಧರರು —

" ಇಹನಲ್ಲ ನೀನು ಮಾತ್ಸರ್ಯದ ಸರಿ ಸುರಿವಲ್ಲಿ ದಿವ್ಯಹೃದಯಾ
ಬಹನಲ್ಲ ಬುದ್ಧಿಗೇಡಿಗಳು ಬಹಳ ಮಾತಾಡುವಲ್ಲಿ ಸದಯಾ "

ಎಂಬ ಎರಡು ಸಾಲುಗಳಲ್ಲಿ ದೇವನ ಅಸ್ತಿತ್ವಕ್ಕೆ ಅಗತ್ಯವಾದ ಪರಿಸರ ಸನ್ನಿ
ವೇಶಗಳೆಂತಿರಬೇಕೆಂಬುದರ ದಿಗ್ದರ್ಶನವನ್ನೇ ಮಾಡಿರುವರು. ಶ್ರೀ
ಶ್ರೀಧರರ ಕಾವ್ಯಶೈಲಿಯ ಮೇಲೆ ' ಗೀಗೀ ' ಪದಗಳ ಪ್ರಭಾವ ಬಿದ್ದಿರುವ
ಅಲ್ಲಲ್ಲಿ ಕಂಡುಬರುತ್ತದೆಂಬುದಕ್ಕೆ ' ಜಂಗಮು ' ಎಂಬ ಕವನವೇ ನಿದರ್ಶ
ಈ ಪ್ರಭಾವದ ಜೊತೆಯಲ್ಲಿಯೇ ಶ್ರೇಷ್ಠ ಅಭಿಜಾತ ವಾಙ್ಮಯದ ವ
ಸ್ಸನ್ನು ಸಹ ಶ್ರೀಯುತರ ಕವನಗಳಲ್ಲಿ ಕಾಣಬಹುದಾಗಿದೆ. ಇದುವೇ ಅ
ಸಮನ್ವಯ ಮಾರ್ಗದ ದೃಷ್ಟಾಂತ. ಉದಾಹರಣೆಗಾಗಿ ' ವೀರಘೋಷ
' ಉಷಾಸೂಕ್ತ ' ಗಳನ್ನು ಉಲ್ಲೇಖಿಸಬಹುದು. ಕೊನೆಯದಾಗಿ, ' ಬ
ಬೆಳಗಬಹ ಕರುಣವಕ್ಕು ತಾನಮೃತಬಿಂದುವೊಂದು ' ಎಂದು ಶುದ್ಧಾಂ
ಕರಣದಿಂದ ಹಾರೈಸಿದ ಅವರ ಬೇಡಿಕೆಯಲ್ಲಿ ನಾನೂ ದನಿಗೂಡಿಸಿ, ' ಜಿ
ಹರಿವ ಕವಿಮನದ ನಲ್ಮೆಯೊಂದಮೃತಬಿಂದು ಕೇಳಿ ' ಎಂಬ ವಿಶ್ವಾಸದಿಂ
ಈ ' ಅಮೃತಬಿಂದು ' ವನ್ನು ಕನ್ನಡಿಗರ ಕೈಯಲ್ಲಿ ಇಡುತ್ತೇನೆ. ಕನ್ನ
ಸರಸ್ವತಿಯ ಭಕ್ತರು ಈ ಅಮೃತಬಿಂದುವನ್ನು ಸವಿದು ಚಿರಂಜೀವಿಗಳಾ
ಲೆಂದು ಹಾರೈಸುತ್ತೇನೆ.

**— ನಾಯಕ ವೆಂಕಟರಾಯ**

# ಅನ್ಯತ್ರಬಿಂದು

## ಭಾರತಸ್ವಾತಂತ್ರ್ಯ

ಸ್ವಾತಂತ್ರ್ಯ ಭಾರತಕೆ ಬಂದಿತೋ ಬಂದಿತೆಂ-
ದಾಸೇತುಹಿಮಗಿರಿಯ ವರೆಗೆ ಹರಿದ
ಘೋಷಣೆಗೆ ಕರ್ಣ ಗಡುಚಿಕ್ಕಿದುದು, ಭಾರತರ
ಶೋಕವಿಂದಿಗೆ ಮುಗಿಯಿತೆಂದು ತಿಳಿದೆ!

ಆದರರೆನಿಮಿಷದಲಿ ಮರುನುಡಿಯಿತೆನ್ನ ಮನ—
ಸ್ವಾತಂತ್ರ್ಯವೆಂದರೇನರ್ಥ? ಅದರ
ಸೌಂದರ್ಯವೆಂತಹದು? ಯಾರಿಗದರಧಿಕಾರ?
ಎಲ್ಲಿ ದೊರಕುವುದು? ಅದಕಾವ ಫಲವು?

ಅರರೆ ಸೌರವ್ಯೂಹಸಂತತಿಯನೆಲ್ಲ ನೆರೆ
ಮರೆಯಿಸುವ ಗಾಢಾಂಧಕಾರವೊಮ್ಮೆ
ಕವಿದಂತೆ ಕಾಣಿಸಿತು! ಮಿತಮನೀಷೆಯ ನರನ
ಮತಿ ಬೆಳಕ ಕಾಣಲಿನ್ನೆಂತೆನಿಸಿತು!

ಧನಶಕ್ತಿ, ಶಾರೀರಶಕ್ತಿ, ಧೀಶಕ್ತಿಗಳ
ಪಡೆದಲ್ಪಸಂಖ್ಯರನವರತ ತಮ್ಮ
ಬಲುಮೆಯಿಂದೂನಬಲರನ್ನಾಳಲೆಳಸುತಿಹ
ಕಲುಷ ಚಿತ್ರವ ಕಂಡೆ ಭಾರತದಲಿ!

ವಂಚನಾವೈದಗ್ಧ್ಯವಿದ್ದವಗೆ ಸರ್ವಸುಖ,
ಮಿಕ್ಕವಗೆ ಮುಕ್ಕು ಮಣ್ಣೆಂದು ನಿತ್ಯ
ಹೊಕ್ಕರೀ ವ್ಯವಹಾರಜಗವ ಹೃತ್ಕುಹರದಲಿ
ನಕ್ಕು ಸೈತಾನ ಗುಡುಗುಡಿಸುತಿಹನು !

ಮಂಕುಕವಿಗಳು, ಮಂಕುಹಿಡಿಯಿಸುವ ವಾಗ್ಮಿಗಳು
ಶಂಖವಾದ್ಯವ ಮಾಡಿ ಸ್ವಾತಂತ್ರ್ಯದ ;
ಕಂಕಾಲದೇಹಿಗಳ ಕಣ್ಗೆ ಧೂಳೆರಚುವುದು
ಮಂಕಾಗಿಸಿತು ಮತಿಯ ಮೂರ್ಛೆಗೊಳಿಸಿ !

ಮಂದಮತಿಭೀರ್ವಲಸರೊಂದಾಗಿ ಬಾಳಬರ-
ದಂಧಕೂಪಾರಪತಿತಾತ್ಮರೆನಿಪ
ಹಿಂದಾಳುಗಳು ಕೋಟಿಸಂಖ್ಯರಿದ್ದರು ಕೂಡ
ಹೊಂದರೆಂದೆಂದಿಗೂ ಸ್ವಾತಂತ್ರ್ಯವ !

ಭಾರತಸ್ವಾತಂತ್ರ್ಯ ಮಿಂಚಿ ಮೆರೆಯಲು ಜನತೆ
ವೀರಧರ್ಮವ ಹಿಡಿದು ನಿಲ್ಲಬೇಕು ;
ಆ ರಿಸಿಗಳೆಂದುದರಗಿಸಿಕೊಳ್ಳಬೇಕು, ಮಾ-
ಯಾವಿಗಳ ಮಾಯೆಯನು ಗೆಲ್ಲಬೇಕು !

## ಕವಿ

ಅವನೆಂಥ ಕವಿಯೊ, ಅವನೆಂಥ ಕವಿಯೊ, ಅವ
ನೆಂಥ ಕವಿಯೊ ಎಂದೆ—
ಜಗದಂತರಂಗ ಸೌಂದರ್ಯಮೂರ್ತಿಯನು
ಕಡೆದ ಕಲೆಯ ತಂದೆ !

ಆ ಮನದ ಚೆಲುವನಾ ಪ್ರತಿಭೆಯೊಲವನಾ
ಕಲೆಯ ಬಲಕೆ ಮಣಿದು,
ಆನಂದಸಾಗರದ ಆಳದಲ್ಲಿ ಹೊ-
ಕ್ಕೆದ್ದು ತಣಿದು ಕುಣಿದು !

ಹೆಜ್ಜಡೆಯು ಚಂದ್ರಮನ ಬೆಳ್ಳಿಬೆಳಕ ನಡು-
ವೆದ್ದು ಚಿಮ್ಮಿ ಹರಿವ
ಸುಜ್ಞಾನಗಂಗೆಯನು ಹೊತ್ತ ಶಿರಕೆ ಮನ
ಸೋತೆ ಚೆಲುವ ಸುರಿವ !

ಹಣೆಗಣ್ಣಿನಪ್ರತಿಮ ವೀರಭಾವದಲಿ
ರುದ್ರನಾದರಿತ್ತ
ಎದೆವಣ್ಣ ಕರುಣೆ ಕಂಗಳಲಿ ಸೂಸುತಿದೆ—
ಏನಿದೀ ವಿಚಿತ್ರ !

ಜಗದಗಲ ಹರಹಿದುರವನ್ನು ಶಕ್ತಿಶಿರ
ಮೆಚ್ಚಿ ಸಿಂಗರಿಸಿದೆ ;
ಸೊಗಯಿಸುವ ಸಿಂಹಕಟಿ ನೃತ್ಯಭಂಗಿಯಲಿ
ಬಳುಕಿ ಕೊಕ್ಕರಿಸಿದೆ !

ಹಿರಿವಜ್ರಸಂಪುಟಗಳೆರಡ ಕವಚಿದಂ
ತಿರುವ ಉಕ್ಕಿನೆದೆಯ
ಸ್ಫುರದಬ್ಜಕೋಟಿಕಾಂತಿಯನು ಕಂಡ ಕವಿ
ಧನ್ಯ ಧನ್ಯ ಗೆಳೆಯ !

ಕೋದಂಡದಂಡದಂತೆತ್ತಿಹಿಡಿದ ಭುಜ
ದಂಡದೊಲೆತವೇನು !
ಆದರ್ಶದರ್ಶನೋದಾತ್ತತಾಂಡವದ
ಕೆಳೆಯ ಸೆಳೆತವೇನು !

ನೆಲಮುಗಿಲುಸಪ್ತಪಾತಾಳದಾಳಗಳ-
ನಳತೆ ಮಾಡಿ ನಿಂತ
ಛಲದಂಕಮಲ್ಲನುತ್ತುಂಗಮೂರ್ತಿಯೂ
ಕಲ್ಪನೆಯೆ ಅನಂತ !

ಭಾರತದ ದುರ್ಗವೆನಿಸಿರುವ ರಕ್ಷಣಾ-
ದಕ್ಷ ಶೈಲರಾಜ

ತನ್ನಣುಗಿಯನ್ನು ಕೊಟ್ಟಿದೆಯ ಮೇಲೆ
ಹೊತ್ತಿರುವ ಭೋಗಭೋಜ !

ಕೈಲಾಸದಲ್ಲಿ ಸ್ವಚ್ಛಂದ ಛಂದದಲಿ
ಕುಳಿತು ನಕ್ಕ ಬಗೆಗೆ
ಕೈಕಾಲು ಬಿಟ್ಟು ತಲ್ಲಣಿಸಿ ಮೃತ್ಯು ತಾ
ಸರಿದ ದೂರದೆಡೆಗೆ !

ಆ ಶಾಂತಯೋಗಿ, ಗೌರಾಂಗ, ಗೌರಿಗೇ
ಶಿಖರವಾಗಿ ನಿಲುವ
ಈಶಾಂತರಂಗವನು ಕೆತ್ತಿಕಡೆದ ಕವಿ
ಚೆಲುವರಲ್ಲಿ ಚೆಲುವ !

ಆ ಚೆಲುವೆ ಸರ್ಗ, ಸುಸ್ಥಿತಿ, ಲಯಂಗಳಿಗೆ
ಬೀಜ, ಸಾಜದೋಜ !
ಆ ನಿಲುವೆ ದಿವ್ಯಕಲೆಗೆಲ್ಲ ಸಲ್ಲ, ನಿ-
ರ್ವ್ಯಾಜರಮ್ಯ ತೇಜ !

## ಅವಳು—ಅವನು

ನಕ್ಕು ನಲಿಯಲಿಂದು ಕುಣಿವ,
ಬಾ ಕೈಯ ತಾ—ತಣಿವ
ತಾ ತ್ರೈಯ ಥಾ || ಪಲ್ಲ ||

“ ಹಕ್ಕಿ ಹಾರಿದಂತೆ ಹಾರಿ,
ದುಕ್ಕ ಸುಖಗಳನ್ನು ಮೀರಿ,
ಅಕ್ಕರನ್ನು ಬೀರಿ ತೂರಿ, ಕುಣಿಯೊ ತ್ರೈಯ ಥಾ, ಬಾ.... ”

“ ರಾಧೆ, ರನ್ನೆ, ನನ್ನತನದ
ಬಳ್ಳಿಯಲ್ಲಿ ನಿನ್ನತನದ
ಬಳ್ಳಿ ಹೆಣೆದುಕೊಂಡ ಬಿನದ— ಕುಣಿಯೆ.... ”

“ ಎದೆಯ ತುಳಸಿ ನಿನ್ನದಿನಿಯ
ಹೂವಿಗಿಂತ ನೇಹವಿನಿಯ-
ದೆಂದು ಎತ್ತಿರುವುದು ದನಿಯ-ಕುಣಿಯೊ.... ”

“ ನಾನು ರಾಧೆ, ನೀನು ರಂಗ,
ಅದಲು ಬದಲಿನೊಂದು ಅಂಗ !
ತೋರಿಸೋಣ ಅದರ ರಂಗ-ಕುಣಿಯೆ.... ”

“ ನಿನ್ನ ರೂಪ ನನ್ನ ದೀಪ !
ಚಿನ್ನಬಣ್ಣವೇಕೆ ಗೋಪ ?
ಬಗೆಯ ಕದ್ದ ನೀನೆ ಭೂಪ !—ಕುಣಿಯೊ.... ”

“ ಪುರುಷಪ್ರಕೃತಿ ನಾವು ಜಾಣೆ,
ಅರ್ಧನಾರಿನಟರು ಕಾಣೆ –
ನನ್ನನಿನ್ನನೇಹದಾಣೆ !—ಕುಣಿಯೆ.... ”

“ ಮುಗುಳುನಗೆಯ ಚೆಲುವ, ನಾವು
ಹೂವುದುಂಬಿ ದುಂಬಿಹೂವು !
ಹೃದಯವಾಯ್ತು ಮಾಗಿ ಮಾವು—ಕುಣಿಯೊ.... ”

“ ಅರಿವುಗಣ್ಣಿನವುಳನೇಹ
ಬೆರೆಸಿ ನಮ್ಮನಿಂದು ಸೋಹ-
ಮೆನಿಸಿತಲ್ಲೆ ಹರಿಯೆ ಮೋಹ—ಕುಣಿಯೆ.... ”

“ ಬೆಣ್ಣೆಯೆದೆಯ ಕಣ್ಣನಗೆಯ,
ಹೆಣ್ಣುಹಿಡುಕ ! ನನ್ನಬಗೆಯ
ಕಣ್ಣತೆರೆಸಿ ಬಿಟ್ಟ ಗೆಳೆಯ !—ಕುಣಿಯೊ.... ”

ಸಖ್ಯಕಿಂತ ಸೌಖ್ಯವಿಲ್ಲೆ ;
ಮುಖ್ಯವೆಲ್ಲ ಮುಖ್ಯನಲ್ಲೆ !
ಮುಖಕೆ ಮುಖವನಿಟ್ಟು ಸಿಲ್ಲೆ—ಕುಣಿಯೆ.... ”

ನನ್ನಿಗಿಂತ ನಗ್ನವಿಲ್ಲ !
ನಲ್ಲಗಿಂತ ಚೆಲುವನಿಲ್ಲ !
ನೇಹಕಿಂತ ಸಿಹಿಯೆ ಇಲ್ಲ !—ಕುಣಿಯೊ.... "

" ಅರಿವೆ ಬೆಳಕು, ನೇಹವೆಣ್ಣೆ,
ಒಲಿದೆದೆಗಳೆ ಬತ್ತಿ, ಹೆಣ್ಣೆ !
ಬೆರೆದ ಮೇಲೆ ಬಗೆಯೆ ಬೆಣ್ಣೆ !—ಕುಣಿಯೊ.... "

## ಎರಡನೆಯ ಬಿತ್ತಿಗೆ

ಯಾರಿಗೆ ಮೊಲೆವಾಲಿದು ನನ್ನೊಡೆಯನೆ
ಮಗು ತೀರಿದ ಮೇಲೆ ?
ಯಾರಿಗೆ ಹೃದ್ಭರ ಸುಪ್ರೇಮಾಮೃತ
ಏಕಾಕಿನಿಯಾಗೆ ?

ಸುಗ್ಗಿಯ ಕಾಲದಿ ಸಂಗ್ರಹಿಸಿದೆನಿದೊ
ಕಾಳುಕಡಿಗಳನ್ನು—
ಬಂಗಾರದ ಹಾಗಿರುವೀ ಬೆಳೆಯನು
ಯಾರಿಗೆ ಕೊಡಲಿನ್ನು ?

ಮುಚ್ಚಿದ ಬಾಗಿಲಿನಗುಳಿಯ ಸೀ ತೆರೆ—
ಹರಗೆಲೆ ಸುರಿ ಒಡೆಯ !
ಬಂಜೆ ನೆಲದ ಹುಲ್ಮುಚ್ಚಿದ ಪೆಂಟೆಯ
ಬಿರುಕಿನಲ್ಲಿ ಗೆಳೆಯ !

ಒಂಟಿದೆಗೆಲ್ಲಿದೆ ಸುಗ್ಗಿಯ ಸಡಗರ ?
ಪ್ರೇಮದ ಬೀಜವನು –
ನೆಡಬೇಕನುದಿನ ಎಡೆವಿಡದರಸಾ,
ಇದೆ ನನ್ನೆದೆಯಾಸೆ !

( ಆ್ಯನ್ ಮಾರೋ ಲಿಂಡ್‌ಬರ್ಗ್‌ಳ ಕವನದ ಭಾವ

## ತೀರ್ಪು

ಇಡಕೊಡದು ಇಡಕೊಡದು ನಿಜಕೂರ್ಮೆಯುನೆಂದೂ,
ನಿಜನಂಬಿಗೆಯೆಂದೂ;
ಬಡ ಮಾನವನೆದೆ ತಾಳದು ಆ ಕೂರ್ಪನ್ನೆಂದೂ,
ಆ ತೀರ್ಪನ್ನೆಂದೂ !

ಹರಿದಾರಿಯು ಹರಿದಾರಿಯು ಹರಿದಾರಿಯು ದೂರ,
ಅಂತರವೊ ಅಪಾರ !
ಅಚಲತೆಗೂ ವಿಚಲತೆಗೂ ಕಡಿಮೆಯೆ ವಿಸ್ತಾರ?
ಕಣ್ಣಿಗೆ ಕಣ್ ತೀರ !

ಮುಗ್ಧಾತ್ಮರ ಮುಗ್ಧತ್ವವು ಸೌಂದರ್ಯವೆ ಹೇಳು—
ಔದಾರ್ಯವೆ ಹೇಳು?
ಎಲ್ಲಕ್ಕೂ ಎಲ್ಲೆ ಕಣೋ, ಸ್ನಿಗ್ಧತೆಗೂ ಕೇಳು—
ಇದೆ ಬಾಳಿನ ಬೋಳು !

ಅರೆವೀಕ್ಷಣ, ಅರೆಶಿಕ್ಷಣ, ಅರೆವಗೆ, ಅರೆಮಾತು,
ಅರೆಗಜ್ಜದ ಸೇತು—
ಅಮರತೆಗೂ ಮೃತಿಗೂ ನಡುವಿರುವನು ತಾ ನೇತು
ಮಾನವ ಕೈಯಾತು !

ಬರ್ದಿಲವನು ಬಯಸುವನವ ನರಕಕೆ ಮುಖಮಾಡಿ,
ನರರೊಡನುಂಡಾಡಿ;
ಬಿದ್ದೋಡುವ ಸಂಭಾವ್ಯವ ಮರೆದಾ ರಣಹೇಡಿ,
ಗೆಲವಪ್ಪುವ ನೋಡಿ !

ತನ್ನೊಡಲಿನ ಮೇಲೇ ತನಗೆಲ್ಲಿದೆಯಧಿಕಾರ?
ಬರಿಯ ಅಹಂಕಾರ !
ತನ್ನಿದೆಯನು ತನಗಳಿಯಲು ಬಾರದ ಕುಂಬಾರ—
ಅವನಿಗೆ ಧಿಕ್ಕಾರ !

ತನ್ನಾಜ್ಞೆಯ ಪಾಲಿಸಲೂ ತನಗೇ ಬಲವಿಲ್ಲ,
ತನಗೇ ಛಲವಿಲ್ಲ—
ತನ್ನಾತ್ಮವ ಕಾಣಲು ಸಹ ತನಗೇ ಕಣ್ಣಿಲ್ಲ,
ತಾನೇ ಮಣ್ಣಿಲ್ಲ!

ನಂಬಿಗೆಗವ ನಂಬಿಗೆಯನು ಕೊಡಬಲ್ಲನೆ ಹೇಳು?
ಇಡಬಲ್ಲನೆ ಹೇಳು?
ನಂಬದ ಕೂರ್ಮೆಯು ಕೂರ್ಮೆಯೆ? ಅದಕೇವೆಯ ತಾಣ?
ಅದೆ ಗಂಟಲ ಗಾಣ!

## ನಾಕ

ತನ್ನ ತಾನು ಗೆಲಬೇಕು ಎಂಬುದಾ-
ದರ್ಶ ಸಿದ್ಧಿಯಣ್ಣ;
ಈ ನನ್ನಿಯನ್ನು ಸಾಧಿಸಲು ಬಾರದವ
ಕಾಣಬೇಕು ಮಣ್ಣ!
ಜಗುಲಿ ಹಾರಿ ಗಗನವನು ಹಾರುವದ
ಕಲಿತ ಮೇಲೆ ಮನುಜ
ಕಣ್ಣಗಲದಲ್ಲಿ ವಿಶ್ವವನೆ ಕಂಡು ತಾ-
ನಾಗದಿಹನು ದಿವಿಜ!

ಅಗಲ ಅಗಲ ಮುಗಿಲಗಲ ಮುತ್ತು ಮು-
ತ್ತಗಲ ಸೊಬಗು ಭವ್ಯ!
ಎದೆಯಗಲವಲ್ಲದಿನ್ನೊಂದು ಕಾಣದದ
ಪೂಜಿಸುವದೆ ದಿವ್ಯ!
ದೇಹ-ಬುದ್ಧಿ-ಮನ ಸಣ್ಣ ಸಣ್ಣವೋ
ಕಾಣಬಲ್ಲವಲ್ಲ—
ನಿರ್ಬಂಧಮುಕ್ತ ಯುಕ್ತಾತ್ಮ ಬಯಸಿದೊಡ-
ನೆದ್ದು ಬರುವದೆಲ್ಲ!

ಅಳತೆಯೊಳಗೆ ಸಿಗಬಲ್ಲುದೆಲ್ಲವೂ
ಕ್ಷುದ್ರ ಕಾರ್ಯರೂಪ,
ತನ್ನಳತೆಯಿಂದ ಜಗವಳೆಯುವಾತನ-
ಜ್ಞಾನದೊಂದು ಕೂಪ!
ಅರಿವಿನಿಂದ ಮುಂಬಂದು ದಿವ್ಯದೌ-
ದಾರ್ಯವೇರಿ, ಸುಳ್ಳ
ಧಿಕ್ಕರಿಸಿ ನಿಲ್ಲಬಲ್ಲಾತ್ಮ ವಿಶ್ವವ-
ನ್ನಳೆವ ದೊಡ್ಡ ಬಳ್ಳ!

ತನ್ನ ಗಡಿಯು ತಾ ದಾಟಿಹೋದ ಮೇ-
ಲಿಲ್ಲವಯ್ಯ ಎಲ್ಲೆ!
ನೀನನ್ಯನಲ್ಲದಿರಲೆಲ್ಲ ನಿನ್ನವಶ-
ವಕ್ಕು ದಾರಿಯಲ್ಲೆ!
ತನ್ನದೆಂಬುದಿರದವನ ತನ್ನವನೆ
ಎಂಬುದೆಲ್ಲ ಲೋಕ—
ತನ್ನನ್ನರೆಲ್ಲ ಹಗೆಯೆಂಬರಿಲ್ಲದಾ-
ದಲ್ಲಿ ನಿತ್ಯನಾಕ!

## ಒಲವಿನ ಹಕ್ಕಿಗಳು

ಒಲವನುಂಡು ಉಲಿಯುವ
ಹಕ್ಕಿ ನಾವು ನಲಿಯುವ ‖ ಪ ‖

೧

ನಾವು ದೇವ ಹರಸಿ ಹಾರಬಿಟ್ಟ ಗಿಣಿಗಳು;
ನಾವು ದೇವಲೋಕ ಕಾಣದೊಲುಮೆಗಣಿಗಳು!

೨

ಸುಧೆಯನೊಮ್ಮೆ ಕುಡಿದ ಸುರರು ಮತ್ತೆ ಕುಡಿಯರು;
ಕುಡಿದು ಬಾಳ್ವೆನಾವು ನಿತ್ಯ ಒಲುಮೆಗುಡಿಕರು!

೩

ಕಣ್ಣುಮುಚ್ಚದವರ ಕಂಪು ಕಂಡು ಚೆಲುವನು,
ಕುರುಡನಾಗಿ ಕಳೆಯಬೇಕು ತನ್ನ ಬಾಳನು!

೪

ಕಂಡ ಚೆಲುವ ಮತ್ತೆ ಮತ್ತೆ ಕಾಣಬಲ್ಲೆವು;
ಮುಚ್ಚಿತೆರೆವ ಕಣ್ಗೆ ಹೊಸತು ಹಳೆಯದೆಲ್ಲವು!

೫

ದೇವಗಾನದೇಕತಾನ ಬೇಸರಲ್ಲವೆ?
ವಿವಿಧ ರಾಗವೆಮ್ಮ ಪೂರ್ಣ ಗೀತಕಲ್ಲವೆ?

೬

ಮುಡಿಯದಿರುವ ರಾಗಕೆಲ್ಲಿ ವಿರಹ, ಸೇರಿಕೆ?
ಮುಡಿದು ಮತ್ತೆ ಸೇರಲಿರುವುದೆಮ್ಮ ಕೋರಿಕೆ!

೭

ಸುಸ್ಥಿರತೆಯು ಸುರರ ಸ್ನೇಹ ಸಡಿಲ ಸಡಿಲವೋ;
ಅಸ್ಥಿರತೆಗೆ ಬೆದರಿ ನಿತ್ಯ ಹತ್ತಿರಿಸುವೆವೋ!

೮

ಭೋಗ ವಿವಿಧವಿರಲು ಒಲುಮೆಗಲ್ಪ ತಾಣವೋ;
ಎಲ್ಲ ಭೋಗವೆದೆಯ ರಾಗ—ಬೇರೆ ಕಾಣೆವೋ!

## ಪ್ರೇಮವ್ರತ

ಪ್ರೀತಿಯೆ ದೇವರು ಎಂದಾರಾಧಿಸ-
ಹೋದೆನು ಬಡಪಾಯಿ—
ಆರಾಧನೆಗಪ್ರೀತಿಯು ಫಲಿಸಲು
ಪೆಚ್ಚಾದೆ ಶಿಪಾಯಿ!

ಮುಗುದತೆಯದು ಎಂದಾದರದೋರಿದೆ,
ಕ್ಷಮಿಸಿದೆನವಿನಯವ;
ಹಗಲಿರುಳೂ ಸುಪ್ರೇಮಾಮೃತ ಕೊ-
ಟ್ಟೆರುಹಿದೆ ನಿಜ ನಯವ!

ಸಾಮವ ಹೇಳಿದೆ, ದಾನವ ಬಳಸಿದೆ,
ಭೇದವ ಮುಂದಿಟ್ಟೆ;
ತಾಮಸ ಹೋಗದು ಬೆದರಿಸಿದರು, ಹಾಯ್
ಪ್ರೀತಿಸಿಯೇ ಕೆಟ್ಟೆ!

ಹೇಳದೆ ಹೋದರೆ ಮೂಗನಪೋಲುಣ-
ಬೇಹುದನಾದರವ—
ಹೇಳಿದರದೆ ಹೆಚ್ಚೆಯ್ಯೋ ರಮಿಸಲು
ಕಳೆವುದು ಇಡಿ ದಿನವ!

ತಾನೇ ತಾನಾಗೆಸಗುವ ಕೆಲಸಗ-
ಳಲ್ಲೇ ತಲ್ಲೀನೆ—
ಏನೆಂದರು ಹೌದೆಂಬಳು, ಕೃತಿಯಲಿ
ತಾ ಕಂಡದ್ದೇನೆ!

ಅಜ್ಞಾನವೊ, ಶತಭಾವವೊ, ಸಲಿಗೆಯ-
ನುಂಡರಗಿಸಿಕೊಳದ
ಪ್ರಜ್ಞಾಹೀನ ಮನಸ್ಕತೆಯೋ, ಇದು
ನ್ಯೂನತೆಯೋ ಒಲಿದ?

ಅರಸಲು ಕಾಣದು ಕಾರಣ, ಕನ್ಯೆಯ
ಶಿಕ್ಷಣವೇ ಇಂತೋ?
ಸ್ಮರಿಸಿದರೆದೆ ಭುಗ್ಗೆಂದುರಿದೇಳ್ವುದು
ಎಂತಹ ಗತಿ ಬಂತೋ!

ಹಿಡಿಯಲು ಬಾರದು, ಬಿಡಲೂ ಬಾರದು,
ಹೇಗಾದರು ಕಷ್ಟ!
ಪ್ರೇಮವ್ರತದೀ ಇಕ್ಕುಳೊಳಡಗಿರೆ
ಜೀವನವೇ ನಷ್ಟ!

# ಕವಿವಿಡಂಬನ

ಹಳ್ಳಕೊಳ್ಳಗಳಲಿ
ಜಾರಿ ಜರುಗಿ ಬಳಲಿ
ಹೆಜ್ಜೆ ಹೆಜ್ಜೆಗೂನೂ
ಎಡವಿದರೂ ತಾನು
ತಡೆದ ಕಲ್ಲ ನೋಡಿ,
“ ತಾಯ್ಮೊಲೆಗಿದು ಜೋಡಿ”
ಬಿದ್ದ ನೆಲದಿ ನಿಂದು,
“ ತಾಯ ತೊಡೆಯಿದೆಂ ”ದು
ಹಾಡಿ ಸವಿವ ಸವಿಯ
ಮೋಡಿಯೇನು ಕವಿಯ ?

ಮುಗಿಲು ಮೇಲೆ ಬಿದ್ದು
ಕೊಡಲು ಸಿಡಿಲು–ಗುದ್ದು
“ ಅಯ್ಯೊ” ಎಂದುಕೊಂಡೂ
ಅದನೆ ಅಪ್ಪಿಕೊಂಡು
ಮುದ್ದನಿತ್ತು, “ ಮಗುವೇ
ಆಹಾ ನಿನ್ನ ನಗುವೇ ! ”
ಎಂದು ರಮಿಸಲೇನು,
ಅಹುದೆ ಗುದ್ದು ಜೇನು ?
ತಿಳಿದು ತಿಳಿದು ಆತ
ಬಿಡನು ತನ್ನ ಮಾತ !

ಅಹಿಯ ಹಡೆದ ತಾಯಿ,
ಕಹಿಯ ಕುಡಿದ ಬಾಯಿ
ನೇಹರುಚಿಯ ನೆನೆಯೆ
ಮೋಹಕೇನು ಕೊನೆಯೆ ?
ಅತ್ತು ಅತ್ತು ಬಹಳ
ನಕ್ಕೆನೆಂದು ಮರುಳ

ತಿಳಿದರುಂಟೆ ತಣಿವು
ಒಳಗೆ ಇರಲು ದಣಿವು ?
ಯಾವ ದೃಷ್ಟಿಯೊ ಇದು-
ಅರಿವಿಗಂತು ಅರಿದು !

ಸೊಕ್ಕೆ ಕಡಿತವನ್ನು
ಪ್ರಿಯೆಯ ಮುತ್ತು ಎನ್ನು
ಎಂಬ ಕವಿಯ ಮಾತು
ಒಡಕು ಮಡಕೆ ತೂತು !
ಎಲ್ಲ ಚೆಲುವೆ ಎಂದು
ಕಾಗೆಗೆ ಗಿಳಿ ತಂದು
ಮದುವೆ ಮಾಡಲಹುದೆ—
ಕಲೆಯಿದೆನ್ನಬಹುದೆ?
ಇಂಥ ದೃಷ್ಟಿಯಲ್ಲಿ
ಸಾಜ ಸೊಬಗದೆಲ್ಲಿ ?

ಇಲ್ಲದಲ್ಲಿ ಇರವ
ರೂಪಿಸುತ್ತ ಬರೆವ
ಕುರುಡು ಕಲ್ಪನೆಯನು
ಪ್ರತಿಭೆಯೆಂಬರೇನು ?
ಕಂಡುದೆಲ್ಲ ಕಾಣ್ಕೆ
ಎಂಬುದಾವ ಪೂಣ್ಕೆ ?
ನಿಜಕೆ ನಿಲ್ಲದೂಹೆ
ಬಿಸಿಲು ಕುದುರೆ ರೂಹೇ !
ಕಚ್ಚುತಿರುವ ಇಹವ
ದಿವ್ಯವೆಂಬ ವಹವಾ !

ದ್ವಂದ್ವದಲ್ಲಿ ನಡೆವ
ಪ್ರಕೃತಿಯೊಗಟನೊಡೆವ
ಹಟದ ಕವಿಯ ಕಣ್ಣು—
ಪಕ್ಷಪಾತ ಹುಣ್ಣು !

"ಹೀಗೆ" ಎಂದು ನುಡಿದು
ನಿಜವ ಬಿಟ್ಟು ನಡೆದು
ಊಹೆಯಲ್ಲಿ ತಣಿದು
ಬಂದಹಾಗೆ ಕುಣಿದು
ಕವಿಯು ಕಂಡುದೇನು ?
ರಸಿಕನುಂಡುದೇನು ?

## ಬಂದ ನೆನೆ

ಹಲವ ಮರೆದೊಂದ ನೆನೆ–ಮನವೆ ಸುಮನೋಘನವೆ,
ಆನಂದನಂದನೋನ್ಮಾದಧುನಿಯ—
ಆ ಲಾಸ್ಯಮೋಹನಿಯನಮರಸಂಜೀವನಿಯ-
ನಾ ಜೀವನೈಕಮಾಧುರ್ಯಖನಿಯ !

ಜಗದ ಜನದಂತರಂಗೋತ್ಥಭಾವತರಂಗ
ಮಗುಚಿ ಷಣ್ಮುಖದಿಂದ ಬಿದ್ದರೇನು ?
ಅಗಣಿತಾರಾತಿಗಳ ಚೆಂಡಾಡಿದಭಿಮನ್ಯು-
ವಿಗೆ ಧೈರ್ಯ ಕೊನೆವರೆಗೆ ಕುಂದಿತೇನು ?

ಮಂದರದ ತೆರ ಬೇಡ, ಮೇರುವಾಗೆಲೆ ಮನವೆ,
ಸೌಂದರ್ಯಸಾರಸರ್ವಸ್ವವಾಗಿ—
ಹೆಂದದಗಣಿತ ಯುಗಪ್ರಲಯಪ್ರವಾಹಗಳ
ಸಂಧಿಸಿಯು ನಿಲ್ಲು ನೀನಲುಗದಾಗಿ !

ಮಾನವ್ಯಪೌರುಷದ ಹಸ್ತದಾಚೆಗೆ ನಿಂತ
ದೇವಪೌರುಷಸಿದ್ಧಿಯೊಂದೆ ಸಿದ್ಧಿ !
ಜ್ಞಾನನಿಃಶ್ರೇಣಿಯಲಿ ಸಾಗತ್ತಲೀಕನ್ಯ
ಮಾನವಿತಿಗಳ ಪಡೆವ ಮುಗ್ಧಬುದ್ಧಿ ?

ಬೆಂಗದಿರ, ತಂಗದಿರ, ತಾರೆ, ಜಲಧಾರೆಗಳು
ಮಂಗಲದನಂಗನ ಮನೋರಮೆಯರು—
ತಂಗಾಳಿ, ತಲ್ಪಗಳ ಸೌಖ್ಯಸಂಕಲ್ಪಗಳ
ಸಂಗತಿಗಳಲ್ಪವಾ ದಿವ್ಯದಿದಿರು !

ಸಾವ ಗೆದ್ದರು ಷಡ್ರಿಪುಗಳ ಗೆಲದಾದರಾ
ದೇವತೆಗಳವರ ಗೆಲುವೆಂಥ ಗೆಲುವು ?
ದೇವತ್ವ ಸಾಧಿಸಿ " ಶಿವೋಽಹಂ ಶಿವೋಽಹಮೆಂ- "
ದಾವನೆಂದನೊ ಅವನ ಬಲವೆ ಬಲವು !

ಎತ್ತರಕ್ಕೆತ್ತರವಿದೆನಿಸುವುತ್ತುಂಗಧೃತಿ-
ಯುತ್ತಮಾಂಗವನೇರಿ ನಿಂತು ನೋಡು—
ಪ್ರತ್ಯುತ್ತರದ ಮೇರೆ ಮೀರ್ದ ಸತ್ತ್ವೋದ್ರೇಕ-
ದುತ್ಪಾತದಲ್ಲಿ ನೀನೊಂದುಗೂಡು !

ಏಳು ನೀನೇಳಬುಧಿಯಾಳದಲಿ ಹೊಕ್ಕರೂ
ಬಾಳ ಜಂಜಡ ಬಾರದಿರದು ಕರೆಯೆ !
ತಾಳಿಯುಂದದಿ ತಲೆಯನೆತ್ತಿ ಹತ್ತಂಗುಲದ
ಮೇಲೆ ನಿಲ್ಲದು ನಿನ್ನ ರಾಜ್ಯ ದೊರೆಯೆ !

## ಇರಿತವೋ ದುರಿತವೋ ?

ಆವ ಗಾಳಿಯೊಳೇನೊ ನಾ ನಂ-
ದನದ ಮಧ್ಯಕ್ಕೆದ್ದೆನೋ !
ಆವ ಮಾಯೆಯೊಳೇನೊ ನಾ ನ-
ನ್ನವಳ ಕಾಣುತಲಿದ್ದೆನೋ !

ಚಂದ್ರಿಕೆಯೆ ಕರಕರಗಿ ಹರಿವಂ-
ತಿತ್ತು ಮುಖದಿಂದೆನ್ನೆಡೆ—
ಸುಂದರಿಯು ನಸು ಬಿರಿಯೆ ತುಟಿಯನು
ಮಂದಹಾಸದ ಮುನ್ನಡೆ !

ಜೇನುದುಂಬಿದ ನೋಟವೆನ್ನನು
ಮೋನಗೊಳಿಸಿತು ತಣ್ಣಗೆ;
ಮಾನಿನಿಯ ಸುಮ್ಮಾನವೊಯ್ಪಿ-
ತ್ತೆದೆಯ ಶಾಂತಿಯ ದಿಣ್ಣೆಗೆ !

ಏನು ಮುಗ್ಧಮನೋಹರಾಕೃತಿ-
ಯೆಂದು ತೃಪ್ತಿಯನುಂಡೆನೋ !
ಧೇನಿಸುತ್ತವಳೊಮ್ಮೆ ಮಿಂಚೆ-
ದ್ದರಳಿದುದ ನಾ ಕಂಡೆನೋ !

ಆರತಿಯನೆತ್ತಲೊಯೆನಿಸಿತೆನ-
ಗಾರತಿಯ ಮೊಗ ನೋಡಲು !
ಸೂರೆಗೊಳಿಸಿತ್ತೆನ್ನರಾಗದ
ತಿಲಕ ಹಣೆಯಲಿ ಮೂಡಲು !

ಅಮೃತಗಿಮ್ಮೃತದ ಕಲ್ಪನೆಗಳನು
ಬಿಸುಟು ಧೈರ್ಯವ ತೊಟ್ಟೆನೋ;
ಸುಮನಸಳ ಚುಂಬನವನಾಶಿಸಿ
ನನ್ನ ನೆನಹನೆ ಬಿಟ್ಟೆನೋ !

ಅವಳ ನಿಶ್ಚಲ ನೋಟವೀಯೆದೆ-
ಯನ್ನು ಕವಳಿಸಿಬಿಟ್ಟಿತೋ !
ಅವಳ ನಿರ್ಮಲ ಭಾವ ಕಂಡಿದು
ಕವನವನ್ನೇ ಕಟ್ಟಿತೋ !

ಬಳಿಯೊಳವಳಾ ಪ್ರೇಮಕಾಂತಿ ಕ-
ಡಂಗಿ ಕರೆಗೊಡಲೆದ್ದಿರೆ—
ತಿಳಿಯದಾದೆನದಾವ ರಸವೆಂ-
ದದರೊಳೇ ನಾನದ್ದಿರೆ !

ಕರದ ಕಂಕಣ ಕಿಂಕಿಣೀರವ
ಪ್ರೇಮನಾಡಿಯ ಮಿಡಿಯಿತೋ !
ವರ ಕಪೋಲದ ನಗೆಯು ಗೆರೆ ಜು-
ಮ್ಮೆನಿಸಿ ಹೃದಯವ ಹಿಡಿಯಿತೋ !

ಪ್ರಣಯವೋ, ಅದು ಪ್ರಣವವೋ, ಹೃ-
ದ್ಯೋಗಸಾಧನಮಂತ್ರವೋ !
ವಿನಯವೋ, ಅವಿನಯವೊ ಅರಿಯೆನ-
ದಾವಶಕ್ತಿಯ ತಂತ್ರವೋ—

ಎದೆಯ ಹಸಿವಿಸದನ್ನ್ಯ ಕೂಗಿನ
ಮಾಧುರೀಪರಿಣಾಮದ
ವಿಧಿಗೆ ಬಾಗಿದೆ; ನೀತಿಭೀತಿಯು-
ನೊಡನೆ ನೀಗಿದೆ ಲೋಕದ !

ಆ ಚೆಲುವು ಮೈದುಂಬಿ ಬರೆ ನಾ
ತೋಳ ಸೆರೆಯನ್ನೊಡ್ಡಿದೆ—
ಆಚೆ ನೋಡಿದೆನೊಮ್ಮೆ ಪುರುಷನ
ನೋಟವೆನ್ನೆದೆಗೊಡ್ಡಿದೆ !

* * * *

ಆವ ಗಾಳಿಯೊಳೇನೊ ನಾ ನಂ-
ದನದ ಕೆಳಗುರುಳಿದ್ದೆನೋ !
ಆವ ಮಾಯೆಯೊಳೇನೊ ಬಂದೀ
ಭೂಮಿಯಲಿ ಬಿದ್ದಿದ್ದೆನೋ !

ನನ್ನವಳ ನಾ ನೋಡುತಿದ್ದ-
ದ್ದನ್ನೆಯುವದೆಂತಾಯಿತೋ ?
ನನ್ನೆದೆಯಲಂಪುಕ್ಕಿ ಹರಿದುದು
ಚೆನ್ನೆಯೆಡೆ ತಪ್ಪಾಯಿತೋ ?

ದೇವಲೋಕದ ಪುರುಷರಾದರು
ಮಚ್ಚರವ ಬಿಡದಿರುವರೆ ?
ಜೀವಿಗಳ ಪಾಗವರು ಕೃಪಣರೆ ?
ಮೆಚ್ಚಿದುದ ಕೊಡದಿರುವರೆ ?

ಒಲವ ಸವಿವುದು ಪಾಪವೆನಿಪುದೆ ?
ದೇವರಾಜ್ಯದ ನೀತಿಗೆ ?
ಚೆಲುವು ಸುಳ್ಳೇನೆಲ್ಲ ಮೋಹವೆ ?
ತಳವಿದೇನಾ ಭೀತಿಗೆ ?

ಮನದೊಲುಮೆ ಮೆಯ್ಯೊಲುಮೆಯಾದರೆ—
ಮಚ್ಚರವು ಬೇರಪ್ಪುದೆ ?
ಅನಿಮಿಷನ ಮನ ಮಾನವನ ಮನ-
ಕಿಂತ ಹೆಚ್ಚಿನಬರ್ಪುದೆ ?

ಒಲವಿಗಿಂತಲು ಚೆಲುವದಾವುದು ?
ದಿವಿಜ ಹೇಳಲು ಬಲ್ಲನೇ ?
ಒಲಿದವರನೊಂದಾಗಗೊಡದಿರೆ
ಚೆಲುವ ಕೊಂದಂತಲ್ಲವೆ

ತಿಂದು ಮೂಸಿದ ಕಂಡು ಕೇಳಿದ
ಕರ್ಮಗಳೆ ಬರಿ ವಂದ್ಯವೇ ?
ಅಂದಿನನುರಕ್ತತೆಯು ಕಾಮವೆ ?
ಕಾಮವೆಂದೂ ನಿಂದ್ಯವೆ ?

ಒಂದಿಕೆಯದಿಂತೇಕೆ ಶಾಸನ-
ವಾಯ್ತು ಪುಂಸ್ತ್ರೀಯರ್ಕಳ ?
ನಿಂದೆಗೇನುಂಟವರ ಬೆಸುಗೆಯೊ-
ಳರಿಯೆ ಬುದ್ಧಿಯ ಜನಗಳ ?

ನಾನೆ ದೀನನೆ ? ಭಾಗ್ಯಹೀನನೆ ?
ನನ್ನವೋಲಿನ್ನನ್ಯರು—
ಹಾನಿಗೀಡಾಗಿಹರೆ ಮಚ್ಚರ-
ದುರಿಗೆ ಸಿಕ್ಕಿ 'ಜಘನ್ಯರು' !

ಪಂಚಮೇಂದ್ರಿಯವಧಮವೆನಿಸಿತೆ ?
ಮುಟ್ಟಿದರೆ ಕೇಡೊದವಿತೆ ?
ವಂಚಿಸಲು ನನ್ನಂಥ ಮುಗ್ಧರ
ಸಂಚುಹೂಡುವುದೊಳ್ಳಿತೆ ?

ಸ್ಪರ್ಶವಿಲ್ಲದ ರಾಗರಸ ರಂ-
ಜಿಸುವುದೇನದು ದಿವ್ಯವೇ?
ಹರ್ಷವೇನಿದೆ ನಾಚಿ ನಡೆದರೆ?—
ಕದ್ದು ಮಾಳ್ಪುದು ಭವ್ಯವೇ?

ನಾಗರಿಕತೆಯ ರೋಗವಲ್ಲದೆ
ಯೋಗ್ಯವೇನೀ ನಾಟಕ?
ಸೋಗು ಮಾನ್ಯವೆ? ನಾಗರಿಕವೇ-
ನೀಯಸೂಯಾಸ್ಫೋಟಕ?

* * * *

ಆವ ಗಾಳಿಯೊಳೇನೊ ನಾ ನಂ-
ದನದ ಮಧ್ಯಕ್ಕೆದ್ದೆನೋ!
ಆವ ಮಾಯೆಯೊಳೇನೊ ಬಂದೀ
ಭೂಮಿಯಲಿ ಬಿದ್ದಿದ್ದೆನೋ!

## ದುಂಬಿ ಮಲ್ಲಿಗೆಗೆ

ನಾನು ನೀನೇನೆಂದರೂ ಜಗ
ಮಾನಿಸುವುದೇ ಮಲ್ಲಿಗೆ?
ಕಾಣುವರ ಕಣ್ಣಳತೆ ಬೇರೆಯ-
ದೇನೆನುವೆಯೀ ಸೊಲ್ಲಿಗೆ?

ದೇವ ಬೇಡದೆ ಹೋದರೂ ಎಲೆ
ಹೂವೆ, ಜನ ಕೊಯ್ಯೊಯ್ಯರೇ?
ಯಾವ ನಿಮಿಷಕ್ಕೆಮ್ಮ ವಿರಹವೊ!
ಭಾವಿಸಿದರೆದೆ ಬಿರಿಯದೇ?

ಬುದ್ಧಿವಂತರ ಕುಲದಿ ಹುಟ್ಟಿದ
ತಪ್ಪಿಗೈನ್ಸ್ಟೀನ್ ಪಂಡಿತ—
ಇದ್ದ ನಾಡಿಂದೋಡಬೇಕಾ
ಯ್ತಲ್ಲವೇನಿದು ಖಂಡಿತ?

ಸತ್ಯವಾದವ ಹಿಡಿದು ಹೊರಟಗೆ
ರಾಜಕುಲ ವಿಷವೂಡಿಸಿ
ಸ್ತುತ್ಯನಾದಾ ಸಾಕ್ರೇಟೀಸನ
ಕೊಂದಿತಲ್ಲವೆ ಕಾಡಿಸಿ ?

ಪದ್ಮಿನಿಯು ತಾ ಮುಗ್ಧಪದ್ಮಿನಿ
ಯಾಗಿ ಜನಿಸಿದ ಪಾಪಕೆ
ಇಥ್ಮವಾದಳು ಕಾಮಿಯಾದ-
ಲ್ಲಾವುದೀನನ ಕೋಪಕೆ !

ಘೋರಿಗನುಕಂಪವನು ತೋರಿದ
ವೀರ ಪೃಥ್ವೀರಾಜನ
ಕ್ರೂರಿ ಕಂಗಳ ಕಿತ್ತನಲ್ಲವೆ ?
ಬೇರೆಯೇನೆಮ್ಮೀ ಜನ ?

ನಲ್ಲುಲಿಯೆ ಗಿಳಿಗಾಯ್ತು ಬಂಧವ-
ದೆಲ್ಲಿ ನುಡಿದರು ಹಿಡಿಯರೇ ?
ಕಲ್ಲಿಗೂ ಸ್ವಾತಂತ್ರ್ಯವಿಲ್ಲ ಗೃ-
ಹಾದಿ ರಚನೆಗೆ ಕಡಿಯರೇ ?

ಸಾಯಲಭ್ಯಸಿಸಿದ್ದನಂದ-
ರ್ಹಂತನಿದನರಿದಿಲ್ಲಿಯ
ಮಾಯೆಯನು ನಂಬುವರೆ? ಹೋಹೆ ಬಿ-
ಡಲ್ಲ ನಾ ಮೃತ್ಯುಂಜಯ !

ಗುಣಕೆ ಮತ್ಸರವಿಲ್ಲವೆಂಬುದು
ರಾಮರಾಜ್ಯದ ಪಾಲಿಗೆ;
ಹಣವೆ ದೈವತವಾದ ಲೋಕದಿ
ಬೇಡಿ ನಮ್ಮೀ ಕಾಲಿಗೆ !

ಸುಮನ ಸುಮ್ಮನೆ ಬಾಡಲೇತಕೆ
ಕೇಳಿ ನನ್ನೀ ನನ್ನಿಯ?
ಯಮಗೆ ಶರಣಾದಲ್ಲದೆಂದೂ
ತಪ್ಪದೆಮಗೀಯನ್ನಿಯ!

ಅಂದ ವಿಷ ನಿನಗಾದುದೀ ಮಕ-
ರಂದ ಹಗೆ ನನಗಾಯ್ತಲ!
ಬಂಧಿಸಿಟ್ಟರೆ ಮನೆಯೊಳೆನ್ನನು,
ನಿನಗೆ ಸೆರೆ ತಲೆಗೂದಲ!

ಚುಂಬಿಸೊಮ್ಮೆ ಸದಾನುರಾಗಿಣಿ
ಸಾಕು; ಮತ್ತೀ ಹರ್ಷದ
ಹಂಬಲೇ ಕೇಡಕ್ಕ ತಿಳಿ, ನಾ
ಬಡವ ಭಾರತ ವರ್ಷದ!

## ಕುರುಡು ದೀಪ

ಕುರುಡು ಭಾವನೆಯೆ
ನಿನ್ನ ನಂಬಿ ನಾ
ದಾರಿ ನಡೆವೆನಲ್ಲೆ;
ಎರಡು ಕವಲುಗಳು
ಕಂಡಕೂಡಲೇ
ನಿನ್ನ ನೆನೆವೆನಲ್ಲೆ!

ಗೆದ್ದ ಕಾಲದಲಿ
ಹೇಗೊ ಸಾಗುವುದು
ಕಣ್ಣು ಮುಚ್ಚಿದೊಡೆಯು;
ಬಿದ್ದ ಕೊಡಲೇ
ಬೇಕು ನೀನೆ ತೋ–
ರದಿರೆ ಬುದ್ಧಿಗೆಡೆಯು!

ನಡೆಯುತಿರಲು ಹೆ-
ದ್ದಾರಿಯಲ್ಲಿ ಕಡೆ-
ಗಣಿಸಿ ಬಿಟ್ಟೆ ನಿನ್ನ;
ಕೆಡೆಯೆ ಹಳ್ಳದಲಿ
ಕಾಡು ಹಾದಿಯಲಿ
ಅದೆ ದೇವರನ್ನ!

ಕಂಡವೇಲೆಯೂ
ಸ್ಪಷ್ಟವಿಲ್ಲ, ಕಾ-
ಣದೆಯು ಇಲ್ಲ ರೂಪ!
ಕಂಡು ಕಾಣಿಸದ
ದೀನಬಂಧುವೇ
ಶರಣು ಕುರುಡು ದೀಪ!

ನಿನ್ನ ಹಿಡಿದು ಜೀ-
ವನದ ಕಂಟಕಗ-
ಳೆಷ್ಟೊ ದಾಟಿ ಬಂದೆ—
ನಿನ್ನ ನೆನೆದು ಬಗೆ-
ಹರಿಯದಾಗಿ ಕೈ
ಕಟ್ಟಿಕೊಂಡು ನಿಂದೆ!

ನಸುಕೊ ಕತ್ತಲಿನ
ಮುಸುಕೊ ಎಂದು ಕಂ-
ಗಾಣದಾಗಿ ನಿನ್ನ
ದೆಸೆಗೆ ಮತ್ತೆ ಕೈ
ನೀಡಿ ಕರೆಯುತಿಹೆ
ಕಾಯೊ ನನ್ನ ಚಿನ್ನ!

# ನಾಳ್ಗಾಹಿಂಗೆ

ಬಿಡುಗಡೆಯ ಸಡಗರವನಡಿಗಡಿಗೆ ಕಂಡಾಯ್ತು
ನಾಡುದ್ದ ನಿನ್ನೆಯಿಂದು;
ಬಿಡುಗಡೆಯು ಪಡೆದ ಭಾರತದ ಬಡ ಜೀವಿಗಳ
ಬಡತನಕೆ ಮುಕ್ತಿಯೆಂದು?

ನಾಡೋಜ ಗಾಂಧೀಜಿ, ಮೂಕಕೋಟಿಯ ದೇವ
ಕಂಡ ಕನಸೆಲ್ಲಿ ಹೋಯ್ತು?
ನಾಡಿಗರ ನಾಡಾಡಿತನದ ಬಾಳುವೆಯಲ್ಲಿ
ಬದಲೇನು ಇಲ್ಲವಾಯ್ತು!

ನಾಡ ಹಂಚಿದುದಾಯ್ತು, ಬೇಡಿದುಪನಿತ್ತಾಯ್ತು,
ಕಾಡುವುದು ತಪ್ಪಲಿಲ್ಲ;
ಬೇಡವಾದುದೆ ಜನಕೆ ಬೇಕಾಗುತಿರಲಿಂದು,
ಓಡಾಟ ನಿತ್ಯವೆಲ್ಲ!

ಹೆತ್ತವರ ಹೊತ್ತವರ ಪುಸ್ತಕವ ತೆತ್ತವರ
ಚೀತ್ಕಾರ ಕೇಳು ಅಲ್ಲಿ—
ಎತ್ತ ಬಿಡುಗಡೆ? ಮತ್ತದೇನಿದೆಡಬಲದಲ್ಲಿ
ಕಾಣುವುದು ದೇಶದಲ್ಲಿ?

ಸತ್ವಹೀನರ ನಾಡಿದಾಯಿತಕ್ಕಟಯೆಂದು
ಹೃತ್ತಾಪದಿಂದ ಮರುಗಿ,
ಸತ್ತಂತೆ ಮಲಗಿಪರು ತಾಯಿ ಮತ್ತೊಮ್ಮೊಮ್ಮೆ
ಕಿತ್ತೆದ್ದು ಕಾಳಿಯಾಗಿ—

ರಕ್ತದಾಹದ ರಕ್ಕಸರ ರಕ್ತ ಸೂರೆಗೊಳ-
ಲೀಳೆಂದನುಜ್ಞೆಯಿತ್ತು,
ಶಕ್ತಿ ನೀಡುತ್ತಿಹಳು ಕೊಳ್ಳದೋ ಕಂದೆರೆದು
ನಾಳ್ಗಾಹಿ ತಲೆಯನೆತ್ತು!

ಕಾಲಕಾಲಕೆ ತನ್ನ ನಾಲಗೆಯ ಚಾಚುವೀ
ಮ್ಲೇಚ್ಛತ್ವವನ್ನು ಕಡಿದು
ಮೂಲವನೆ ಕಿತ್ತೊಮ್ಮೆ ಪಾಕಶಾಸನನಂತೆ
ಎಸೆಯುದರ ಬುಡವ ಹಿಡಿದು !

ಪಾಲುಗಾರಿಕೆಯಿಂದ ಪಾಲಾದ ನಾಡಿನ ‘ ಕ-
ಪಾಲಿ ’ಸಿಡಿದೇಳು ನಿನ್ನ
ಹಾಳುಗೈದತ್ಯುದಾರತೆಯ ಬಿಡು, ಬೇಳ್ವ ಭ-
ಸ್ಮಾಸುರರನಿಕ್ಕು ಮುನ್ನ !

ಏನು ಬಿಡುಗಡೆಯುದಯವೀ ರಕ್ತಪಂಕಿಲತೆ-
ಯೆಂಥದೀ ಕಲಹಕಾರ್ಯ ?
ಕಾನನದ ನಾಗರಿಕ ನೃತ್ಯಕೇಸಿದು ಮೂಡು
ಪಡುದೆಸೆಗಳಲ್ಲಿ ತೂರ್ಯ ?

ಏಳು ಭಾರತದಾಳೆ ಗಂಡುಡಿಯು ಬಿಗಿದು ನೀ
ಕಾಳುಗೆಡೆವವರ ಹಮ್ಮ
ಏಳಬುಧಿಯಾಳದಲಿ ಹೂಳಿಬರದಿದ್ದರಿದೊ
ಹಿಡಿವರವರೆಮ್ಮ ದಮ್ಮ !

## ರಾಷ್ಟ್ರಪಿತಾಮಹ

ಈತನಭಿನವಬುದ್ಧನೀತಕಾರಣಪುರುಷ,
ಸೋತು ಗೆಲುವ ವಿದಗ್ಧ ಸಂಪ್ರಬುದ್ಧ;
ಭೀತರನು ಕಾವ ನಿರ್ಭೀತಾತ್ಮನೀತ ನವ-
ನೀತ ಕೋಮಲ ಹೃದಯ, ನವ್ಯಸಿದ್ಧ !

ಸ್ವಾತಂತ್ರ್ಯಸಮರಪಂಡಿತ, ಸರ್ವಧರ್ಮಸಹ-
ನಾತತ್ವಮಂಡಿತ, ವದಾನ್ಯವರ್ಯ;
ಭೂತ ಭೌತಿಕ ಕಾರ್ಯಕಾರಣಕಲಾವೇತ್ತ್ರ,
ನೂತನ ವಿಭೂತಿ, ನರಲೋಕದಾರ್ಯ !

ಭಾರತದ ಭಾಗ್ಯಚಕ್ರವ ತಿರುಗಿಸಿದ ತಂತ್ರ-
ಸಾರ, ಸರ್ವೋದ್ಧಾರ, ಸತ್ಯಪೂರ;
ದೂರದರ್ಶನ, ದುಗ್ಧಹಾಸ, ಮೋಹನದಾಸ,
ಆರು ಹಗೆಗಳ ಗೆದ್ದ ಶಾಂತವೀರ!

ಹಿಡಿದು ಸತ್ಯಾಹಿಂಸೆಯಸ್ತ್ರಗಳ ದುರ್ಮನರ
ಕೆಡೆದ ಕದನಕಪಾಲಿ, ಕರ್ಮಯೋಗಿ;
ನುಡಿದಂತೆ ನಡೆವ ನವ ದೇವಮಾನವ, ನಮ್ಮ
ಜಡೆಯಿರದ ತವಸಿ, ದಿವ್ಯಾನುರಾಗಿ!

ಈತ ಯುಗಪುರುಷನೆಂದೆನಿಸಿ ಬಾಳಿದ, ದೇವ-
ಗೀತಯಶನಾಗಿ ಭಾರತವಿಧಾತ;
ನೀತಿನಭದುತ್ತ್ರಭ ದಿವಾಕರ, ನವೀನಮನು–
ವೀತ ಪಾವನಚರಿತ, ಶಾಂತಿದೂತ!

( ಗಾಂಧಿಯವರ ೭೯ನೆಯ ಹುಟ್ಟುಹಬ್ಬದಲ್ಲಿ )

## ಬೇರೆ ಬೇರೆ

ಅಮೃತಸಿದ್ಧಿಯ ಕಂಡ ಯೋಗೀಂದ್ರನದೆ ಬೇರೆ,
ಹಾಲಾಹಲವನುಂಡ ಬಗೆಯೆ ಬೇರೆ;
ಸುಮನರಾಶಾಬಂಧ ಕೋದ ಮಾಲೆಯೆ ಬೇರೆ,
ವಿಮನರೆದೆಯಾಳದುಗ್ರತೆಯೆ ಬೇರೆ!

ಉಂಡುಟ್ಟು ನಲಿದ ನರ ಕಂಡ ಕಾಣ್ಕೆಯೆ ಬೇರೆ,
ಖಂಡಮಾಂಸವು ಕರಗಿದವನದನ್ಯ;
ಗಂಡನುಳ್ಳವಳ ಹಸದನದ ಸಂಭ್ರಮ ಬೇರೆ,
ಮುಂಡನಕೆ ತಲೆಗೊಡುವ ಸಮಯವನ್ಯ!

ಕಾಳಿದಾಸನ ಕಾವ್ಯದುಲ್ಲಾಸವೇ ಬೇರೆ,
ಬಾಳಾಳ ಕಂಡ ಭವಭೂತಿ ಬೇರೆ;
ನಾಳಿನೇಳಿಗೆಯು ನಿಶ್ಚಯವ ಕಂಡವ ಬೇರೆ,
ಗಾಳಿಗೋಪುರ ಕಂಡ ಕತೆಯು ಬೇರೆ!

ಸ್ವರ್ಗಸೀಮೆಗೆ ಸೇರಿದವನ ಹಾಡೊಂದು ಬಗೆ,
ದುರ್ಗಮಾರಣ್ಯಸ್ಥನುಕ್ತಿ ಬೇರೆ;
ಸ್ವರ್ಗದಪ್ಸರೆಯು ವಿರಹಾಲಾಪ, ಬಡ ಕೂಲಿ
ವರ್ಗದವಳೆದೆಗಾಯ–ಬೇರೆ ಬೇರೆ!

ಧನಿಕ ರಸಿಕನ ಕಾವ್ಯರುಚಿವಿಲಾಸವೆ ಬೇರೆ
ದಲಿತ ದೀನನ ದೃಷ್ಟಿಧಾರೆಯನ್ಯ;
ತಿಳಿದು ತಿರುಳುಂಬವನ ತರವೊಂದಪಕ್ವಮತಿ
ಸುಲಿದು ಸಾರವನೆಸೆವ ರೀತಿ ಭಿನ್ನ!

ಹಸುಳೆ ಹಾಲೆಂದೀತು, ಬಸವಳಿದ ಪಯಣಿಗನು
ತುಸು ನೀರುಮಜ್ಜಿಗೆಯು ತನ್ನಿರೆಂಬ;
ಕಸುವಿರಲು ರಸವೂಟ, ಕಾಹಿಲೆಯೊಳಿರೆ ಕೊಟ್ಟ
ವಿಷವನ್ನೆ ಯೋಗಜ್ಞ ರಸ್ಯವೆಂಬ!

## ಕನ್ನಡ ಗುಡಿ

ಹಾರು ಕನ್ನಡದ ಬೀರ ಗುಡಿಯೆ! ತಲೆ-
ಮಾರು ಮಾರಿನಿಂದ
ತಪಿಸೆ ದೇವ ಕಂದೆರೆದು ಕನ್ನಡದ
ಜಯಕೆ "ಅಸ್ತು" ಎಂದ;

ಇಂದು ಜನತೆಯೆಚ್ಚತ್ತು ದೈವಕೃಪೆ
ಬಳಸಿಕೊಳ್ಳಬೇಕು;
ಮಂದ ಗಮನವನು ಬಿಟ್ಟು ಗಾಳಿದೇ-
ರೇರಿ ಸಾಗಬೇಕು!

'ಕನ್ನಡಮ್ಮ' ಯೆಂದಂದಿನಿಂದ ಕ–
ಣ್ಣೀರುಗರೆದ ನಮ್ಮ
ಅಣ್ಣ ತಮ್ಮದಿರ ಕಾಯ್ಪು ಕಡುಗಿ ಕರ–
ವಾಳವಾಗಲೆಮ್ಮ!

ದೇವದಾನವರು ಅಡ್ಡ ಬಂದರೂ
ಕೇಳಲೊಲ್ಲೆವಿನ್ನು;
ಜಾವಜಾವಕೂ ಉರಿಯುತಿರುವುದು-
ತ್ಕಂಠೆ ತೆರೆದ ಕಣ್ಣು!

ನಾಡಹಬ್ಬವೀ ನಾಡಿನೇಳಿಗೆಯು
ನಾಂದಿಯಾಗಿ ನಿಲಲಿ;
ಮೂಡಿ ಬರಲಿ ಮಿಂಚಂತೆ ಹುರುಪು ನರ-
ನಾಡಿನಾಡಿಗಳಲಿ!

'ಉಧೋ' ಯೆಂದು ಕನ್ನಡದ ನೋಂಪಿಯನು
ಹೊತ್ತ ನಾಡದಳವೇ;
ಇದೋ ಎತ್ತಿಹಿಡಿದೆವ್ಮು ಬಾವುಟವ
ನಡೆಯಿರಿನ್ನು ತಡವೇ?

## ಪ್ರಾರ್ಥನೆ

ಕರೆಯೊ ಹೇ ಗುರು, ಕರೆಯೊ ಪುಣ್ಯ-
ಪ್ರಾತರುದಯದೊಳಿಂದು; ನೀ
ಕರೆದ ವಿಶ್ವವಿಶಾಲ ಮೇಲಕೆ
ತೆರೆದ ನಿನ್ನ ದ್ವಾರದೆ!

ಉದಯಗಿರಿಯುತ್ತುಂಗ ಶಿಖರದೆ
ಎನ್ನ ಕರೆ ದನಿಯೆತ್ತಿ ನೀ;
"ಹುದುಗಿತಂಥತಮಸ್ಸು ನೋಡಿದೊ,
ಬೆಳರುಗಡಲಿನ ತಳದಲಿ!

"ಏಳು ಮಗು ನೀ ಸ್ವಾರ್ಥದಿಂದೆ-
ದ್ದೇಳು ಹೀನತೆಯಿಂದ ನೀ;
ಏಳು ಜಾಡ್ಯವ ಕೊಡಹಿ ಧೀರೋ-
ದಾತ್ತವೃತ್ತಿಯೊಳಿಂದು ನೀ!"

(ರವೀಂದ್ರರ ಕಾವ್ಯದ ಭಾವಾನುವಾದ)

## ತುಂಬಿ ಬಾರ

ಅಂಬರದಿ ವಿಜೃಂಭಿಸಿರುವ
ರಂಭೆ ಬೆಳಕಿನಿಂದಿರೇ,
ನಂಬಿದೆದೆಯ ತುಂಬಿಬಾರ
ಚಿತ್ಕಲೈಕಮಂದಿರೇ ॥ ಪಲ್ಲ ॥

ಅಂಧಕಾರವಿಂದು ಕವಿದು ಮನ್ಮನವನು ನುಂಗಿದೆ;
ಸಂಧಿಸಾಧಕತ್ವ ಕಾರ್ಯಕಂದರದಲಿ ತಂಗಿದೆ.
ಕೋಪತಾಪ ಕಜ್ಜಲ
ಕೂಡಿ ನನ್ನ ಕಂಗಳ
ದೀಪವನ್ನೆ ಲೋಪ ಮಾಡಿ
ಬೆಳೆಯುತಿಹುದು ನೋಡಲ !
ಈ ಪ್ರಕಾರ ಕೇವಲ
ಹರಿದು ಬಂದು ಕಾವಳ
ಆತ್ಮವನ್ನೆ ನೂಕಿರುವುದು
ಮಾಯೆಯಲ್ಲಿದಸದಳ !
ಏಕೆ ಬಾರದಿರುವೆ ಬೆಳಕೆ ಭುಗ್ಗನೆದ್ದು ಚಿತ್ತದ
ವ್ಯಾಕುಲಾಂಧತೆಯನು ಕಳೆಯೆ ಕಣ್ಣ ತೆರೆಸಿ ಸತ್ವದ ?

ಸತ್ವ ರಜ ತಮಸ್ಸು ಬೆರೆದ ಹೃತ್ಸಮುದ್ರ ಮಧ್ಯಕೆ
ಅತ್ಯುದಗ್ರ ಸೂರ್ಯನಾಗಿ ಉದಯಿಸರಿವೆ ಸದ್ಯಕೆ—
ಉಪ್ಪನುಳಿಸಿ ತಳದಲಿ
ವಿಮಲ ಜಲವ ದಿವದಲಿ
ಒಪ್ಪುವಂತೆ ಮಾಳ್ಪ ತೇಜ-
ವಾಗು ನನ್ನ ಬಾಳಲಿ;
ಕಪ್ಪು ಕಪ್ಪು ಸುತ್ತಲು,
ಮೈಮನಕ್ಕೆ ಹತ್ತಲು,
ಹುತ್ತದಲ್ಲೆ ಸತ್ತು ಬಿದ್ದ
ಹಾವಿನೊಂದು ತೆರದೊಳು
ಮಿತ್ತು ಮೆಟ್ಟಿದಂತೆ ಎದೆಯು ಕುಗ್ಗಿ ತಾತ್ಮಕೋರಕ;
ತುತ್ತು ಕುತ್ತು ತರುವ ಹಾಗೆ ಇಲ್ಲದಾಗೆ ಜೀರಕ !

ಮೇಘಪರ್ವತಾಗ್ರದಿಂದ ಧುಮುಧುಮುಕುವ ಧಬಧಬೆ,
ಯೋಗಿಚಿತ್ತದಲ್ಲಿ ಬುಗ್ಗೆಯೇಳ್ವ ಸತ್ಯಚಿತ್ರ್ರಭೆ !
ಸುರಿ ಸುರಮ್ಯ ರಸಧುನಿ
ಹರಶಿರಸ್ಥ ಪಾವನಿ,
ಮಿಂಚಿನಲೆಗಳೆಬ್ಬಿಸುತ್ತ
ಬೆಳಕಿನಮ್ಮ ಮೋಹನಿ !
ಸೂರ್ಯಚಂದ್ರರಂಗಳ
ಮುಟ್ಟಿಬರಲಿ ಮಂಗಳ;
ದಿವ್ಯ ದೀಪ ಭವ್ಯವಾಗಿ
ಬೆಳಗಲಿ ಕಿರಣಂಗಳ !
ಸಪ್ತ ನಾಕ ಸಪ್ತ ನರಕಗಳನು ತುಂಬಿ ತುಳುಕುವ
ಸುಪ್ತಶಕ್ತಿರೂಪೆ ಬಾರ ತಾಮಸವನು ಕಳೆಯುವ !

## ಉದಯರಾಗ

ಏಳು ರಮೇ ಏಳು ಸುಪ್ರ-
ಭಾತ ವಾತ ಬೀಸಿದೆ,
ಏಳು ರಮೇ ಏಳು ಕುಸುಮ-
ಸಾರ ಸುತ್ತು ಸೂಸಿದೆ ॥ ಪ ॥

ಏಳು ಮುಸುಕು ತೆರೆದು ರನ್ನೆ
ಏಳು ಮನ್ಮನೋನ್ಮನಿ,
ಏಳು ಮೂರು ಲೋಕವನ್ನೆ
ತುಂಬಿ ಹರಿವ ರಸಧುನಿ !

ಚೆನ್ನೆ ಚಿತ್ತರಂಗದಲ್ಲಿ
ಚೆಲುವ ಚೆಲ್ಲಿ ಬಾ ರಮೇ,
ನನ್ನ ಹೃದಯವನ್ನು ಸೂರೆ-
ಗೊಂಡ ಪ್ರೇಮವಿಭ್ರಮೇ !

ಅಮರ ಪಾರಿಜಾತದಂಥ
ಮೃದು ಹೃದಂತರಾಳದ
ವಿಮಲಭಾವ ನೀಡ ಬಾರ
ಉಂಡು ಜೀವ ದಣಿಯದ !

ನಿದ್ದೆಯೆನ್ನು ಗೆಲ್ಲಬೇಹು-
ದದು ಜಗಕ್ಕೆ ತಾಮಸ,
ಬುದ್ಧರಾಗಬೇಕು ನಾವು
ಬುದ್ಧಿಯಹುದು ತೈಜಸ !

ಗೆಲ್ಲಲಾರದೇನನೊಲವೆ,
ಒಲವಿನಮೃತಚುಂಬನ ?
ಎಲ್ಲ ಸೋಗು ಮಿಕ್ಕ ಸೊಬಗು—
ನಿಜದ ನಿಜವಿಡಂಬನ !

ಸ್ನಿಗ್ಧೆ ಏಳು ಮುಗ್ಧೆ ಏಳು,
ಏಳು ಬಾಳ ಬೆಳಗಿನ
ದುಗ್ಧವೀಂಟಲೇಳು ಕೊಡಹಿ
ಕತ್ತಲನ್ನು ಒಳಗಿನ !

ಕಣ್ಣು ತೆರೆ ಗುಲಾಬಿಯಂತೆ
ಕಣ್ಣ ಮಣಿ ಸುಹಾಸಿನಿ,
ಕಣ್ಣಿನಲ್ಲೆ ಕಬ್ಬವುಂಟು
ನೋಡು ಮಧುರಭಾಷಿಣಿ !

ಅಕ್ಷಿಯಲ್ಲೆ ಕುಳಿತು ಪ್ರೇಮ
ಪಕ್ಷಿ ಕುಕಿಲ ಕಲಿವುದು !
ಅಕ್ಷಿ ನಮ್ಮ ಹೃದಯಕಿಹ ಗ-
ವಾಕ್ಷ,ಬೆಳಗನುಲಿವುದು !

ಕಣ್ಣ ಸೊಲ್ಲಿಗಿಂತ ಮಧುರ-
ವಿನ್ನದಾವ ಸೊಲ್ಲಿದೆ ?
ಕಣ್ಣ ಮುಚ್ಚೆ ಭೇದ ಮಸಣ
ಮನಗಳಿಂಗದೆಲ್ಲಿದೆ ?

ಇಂದ್ರಿಯಂಗಳೈದರಲ್ಲಿ
ಕೇಂದ್ರವಾತ್ಮಶಕ್ತಿಯು
ತಂದ್ರತೆಯನು ಕಳೆದ ಕಣ್ಣು—
ಹರಿದು ನೋಡು ಸುಪ್ತಿಯ !

ಏಳು ಕಣ್ಣ ತೆರೆದು, ಏಳು
ಕಡಲ ತುಂಬಿ ತುಳುಕುವ
ಬಾಳ ಬೆಳ್ಳಿ ಬೆಳರ ಸೂಸಿ
ಒಡಲನೆರಡ ಮುರಿಸುವ !

ಸಪ್ತವರ್ಣದಿಂದ ಕವಿಯ
ಸಪ್ತಭಾವವೆದ್ದಿದೆ;
ವ್ಯಾಪ್ತವಾಯ್ತು ನಲ್ಮೆರಂಗು
ಹರೆಯುವದನು ಹೊದ್ದಿದೆ !

ದೇವ ತೆರೆದ ಕಣ್ಣಿದಲ್ತೆ—
ನನ್ನ ಹೃದಯದರುಣತೆ !
ನಿನ್ನ ಕಣ್ಣು ಹೀರಲದನು
ಬರ್ಕು ನಿನಗೆ ಚೆಲ್ವಿಕೆ !

ನನ್ನ ಎದೆಗೆ ಮಿಗಿಲು ಮುಕುರ-
ವುಂಟೆ ನಿನ್ನ ಆತ್ಮಕೆ—
ತನ್ನ ತಾನೆ ನೋಡಿಕೊಳಲು
ಕಣ್ಣು ತೆರೆದ ಮಾತ್ರಕೆ !

ಅಲ್ಲಿ ಕಾಂಬುದೇನು ? ಹಿಗ್ಗು—
ದೇವಹೃದಯದೊಪ್ಪವು !
ಚೆಲ್ಲಿ ಸೂಸಿ ಹರಿವ ನೇಹ
ಕುಳಿತು ಹೋಹ ತೆಪ್ಪವು !

ಅಲ್ಲಿ ಮುಳುಗಿ ಮಿಂದ " ನಾನು,
ನೀನು " ಏಕವಪ್ಪವು !
ಅಲ್ಲಿ ಹೊಕ್ಕ ಮೇಲೆ ಹೊರಗೆ
ಹೊರಡಲೆಂದು ಒಪ್ಪವು !

ಅಲ್ಲಿ ನೋಡು—ಎದ್ದು ಕೂಡು
ಕೇಳು ಪ್ರೇಮವಚನವ;
ಎಲ್ಲಿ, ಹೃತ್ಕವಾಟಪುಟವ
ತೆರೆ—ನಿಮೇಷನಿಚಯವ !

ದೇವಗಂಗೆಯಂತೆ ಹರಿದು
ಹೃದಯವನ್ನು ಸೇರಿದ
ಪ್ರೇಮಧಾರೆ ನೀರೆ, ಏಳು
ಜನ್ಮದಿಂದ ಕೋರಿದ !

ಶ್ರವಣಮಧುರ ನನ್ನ ಮಾತು,
ನಯನ ಮಧುರವಾಕೃತಿ !
ಅಧರಮಧುರ ಮುದ್ದು, ಹೃದಯ-
ಮಧುರ ರತಿಚಮತ್ಕೃತಿ !

ನಾನು ನೀನು ನಾವೆ ನಾವು
ಬರಿಯ ಜೇನು ಮೋಹಿನಿ
ಕಾಣದಂಥ ಕಾವ್ಯದಲ್ಲಿ
ಹರಿವ ರಸತರಂಗಿಣಿ !

ಉಷೆ ದಿನೇಶಗಿತ್ತು ಮುತ್ತ-
ನೆಬ್ಬಿಸಿಹಳು ಕಾದಲೆ;
ದಿಶೆಗಳೆಲ್ಲ ಕಮಲವಾಗಿ
ತೂಗುತಿಹವು ಹೊಂದಲೆ!

ನೇಸರರಸಿ ಪತಿಯನೆಚ್ಚ-
ರಿಸುವುದಲ್ಲಿ ಹೊಂದಿದೆ;
ಸೂಸುನೇಹದರಸಗಿಲ್ಲಿ
ಬೇರೆ ನಿಯಮ ಬಂದಿದೆ!

ಅರಳು ಅರಳಿನಂತೆ ಸರಳೆ
ಕಣ್ಣ ತೆರೆದು ಹೃದಯದ,
ಮರಳು ನನ್ನ ಪ್ರೇಮಗೃಹಕೆ
ಅಮರಲೋಕವರಿಯದ!

ಏಳು ಶಕ್ತಿ ಏಳು ಮೇಲಿ–
ನೇಳು ಲೋಕ ಕೇಳುವ,
ತೋಳುಗಾಹಿನಲ್ಲಿ ಬಯಸಿ
ಪಡೆದ ರಾಜ್ಯವಾಳುವ !

## ಅಂದು - ಇಂದು

ಅಂದು ವಿಜಯದಶಮಿ ವಿಜಯ
ತಂದುದೆಮ್ಮ ನಾಡಿಗೆ;
ಸಂದ ವೀರಯೋಧವರ್ಗ
ತಂಗಿದಂಥ ಬೀಡಿಗೆ !
ಚಂದ್ರಹಾಸವಿತ್ತು ವಿಜಯ
ನಗರ ರಸಿಕರೆಡೆಯಲಿ;
ಚಂದಕಿಟ್ಟು ಚಿಂದದೊಡವೆ
ಗಳನು ನೋಳ್ಪ ಕಡೆಯಲಿ !

ಕನ್ನಡಿಗರ ಕೀರ್ತಿ ದಕ್ಷಿ-
ಣಾಪಥವನು ಬೆಳಗಿತು.
ಕನ್ನಡಪ್ರಭಾವ ಭಾರ-
ತದಲಿ ಬಿಡದೆ ಮೊಳಗಿತು.
ಹೊನ್ನ ತೊಟ್ಟು ಹೊನ್ನ ಕೊಟ್ಟು
ಬಾಳಿ ಬದುಕಿತೀ ಜನ;
ಉಣ್ಣಲಿಂದು ಉಳಿದುದೇನು—
ಬರಿ ದರಿದ್ರತಾಧನ !

ಗಂಡುತನವಡಂಗಿ ಷಂಢ-
ತನಕೆ ದಾರಿ ಬಿಟ್ಟಿತು.
ಪುಂಡ ಹಗೆ ನುಸುಳ್ದು ನಾಡ
ಹರಿದು ಹಂಚಿ ಕೊಟ್ಟಿತು.

ಕಂಡ ಕಂಡವರಿಗೆ ಕಾಲು
ಬಿದ್ದು ಕಳೆದು ಸಂಪದ;
ಉಂಡು ಕಂಬನಿಗಳ ಕೂಳ
ಬಾಳಿತೆಮ್ಮ ಜನಪದ.

ಇಂದು ನಾಡ ಹಬ್ಬ ಹಿರಿಯ-
ರಂದು ಪಡೆದ ವೈಭವ
ನಂದಿ ಹೋದುದನ್ನು ನೆನೆದು
ನೊಂದು ಮೇಣ್ಮವೋನವ
ಚಂದ್ರಹಾಸ ಹಿಡಿದು ನಾಡ
ಕಟ್ಟುವ ಪ್ರತಿಜ್ಞೆಯು
ತಂದು ಬಗೆಗೆ, ಕಳೆಯಬೇಕು
ಕನ್ನಡಿಗರವಜ್ಞೆಯು !

ಏಳಬೇಕು, ಮಿದುಳ ಮಾಂದ್ಯ
ಹೂಳಬೇಕು; ಒಮ್ಮತ
ಹೇಳಬೇಕು: ನಾಡಿದೊಂದು
ಎಂದು ಹುರುಪು ಚಿನ್ಮಯ!
ಆಳುಬಾಳ ಕೀಳುತನವ
ಕಳೆದು ದಿವ್ಯ ಭಾವವ,
ತಾಳಬೇಕು, ತೋರಬೇಕು
ನಮ್ಮ ನಮ್ಮೊಳೈಕ್ಯವ.

ಆಳಬೇಕು ನಾವೆ ನಮ್ಮ
ನಾಡನೆಲ್ಲ. ಭಾರತ
ಕೇಳಬೇಕು ನಮ್ಮ ಪ್ರಾಂತ-
ದೊಸಗೆ ಸೂಕ್ತವೆನ್ನುತ.
ಹೇಳಬೇಕು ನಾಕದಲ್ಲಿ
ಕುಳಿತ ನಮ್ಮ ಹಿರಿಯರು—
“ತೋಳು ಬಲಿದ ಮಕ್ಕಳಿವರು
ಅಂಜಿಕೆಯನೆ ಅರಿಯರು !”

( ೧೯೪೭ರ ನಾಡಹಬ್ಬದಲ್ಲಿ ಹುಬ್ಬಳ್ಳಿಯಲ್ಲಿ ಅಂದವನ್ನ

# ಉತ್ತರ ರಾಗ

ಮಲಗು ಚಿನ್ನ, ಮಲಗು ರನ್ನ
ಮಲಗು ಮುದ್ದು ಮೋಹನ;
ಮಲಗು ನನ್ನ ಮನದ ಜೇನೆ
ಮಲಗು ನನ್ನ ಜೀವನ! ‖ ಪ ‖

ಏಳು ಜನುಮದಿಂದ ಬೇಡಿ
ಪಡೆದ ಪ್ರೇಮಭಾವನ!
ಏಳು ಲೋಕವಾಳಬಲ್ಲ
ನಿನ್ನ ಚರಿತ ಪಾವನ!

ಮಲಗು ಕಾಂತ, ಮಲಗು ಶಾಂತ,
ಮಲಗು ಸೌಖ್ಯಸಾಧನ!
ಮಲಗು ಒಲವಿನರಸ, ನನ್ನ
ಹೃದಯಹರ್ಷವರ್ಧನ!

ಆರು ವೈರಿಗಡಣಗಳನು
ತೂರಿ ಸೆಣಸುವೀ ಜಗ
ಗಾರುಗೆಡಿಸಿತೇನು? ಮಲಗು
ವೀರ, ನನ್ನ ಮುದ್ದುಗ!

ನನ್ನ ಕೊರಳ ಮಣಿಯೆ, ವಿಪುಲ
ಪುಣ್ಯರೂಪ, ನಿರ್ಮಲ!
ನನ್ನ ಸುಪ್ತಹೃದಯಕೆರೆದೆ
ಬೆಳಕ ನಿನ್ನದುಜ್ವಲ!

ಪ್ರಾಣಪದಕ, ಪ್ರೇಮದೆರಕ-
ದಿಂದ ನಿನ್ನ ನಲ್ಮೆಗೆ—
ಮಾಣದೆಂದು ಸೇವೆಗೈವೆ,
ಒಲಿಯೊ ನನ್ನ ಒಲ್ಮೆಗೆ!

ತಪ್ಪುತಡೆಯ ತೊಡೆದು ಕರುಣ-
ದೃಷ್ಟಿಯಿಂದ ನೋಡಿದೋ !
ಒಪ್ಪದೊಡೆಯ ಒಪ್ಪಿಕೊಳ್ಳೊ
ನನ್ನದೆಲ್ಲ ನಿನ್ನದೋ !

ನನ್ನ ಪಂಚಬಾಣ, ಮಲಗು
ನನ್ನ ಹೃದಯಸುಂದರ —
ನನ್ನ ಚಿತ್ತರಂಗನಟ, ಸ-
ಮುಲ್ಲಸತ್ಸುಧಾಧರ !

ಮಲಗು ನೇಹದೂಟವಿತ್ತ
ಮೃದುಹೃದಂತರಾಳನೇ !
ಮಲಗು ನಲ್ಮೆದೋಟಕೆನ್ನ-
ನೊಯ್ದ ಮನ್ಮರಾಳನೇ !

ಆಯಸಕ್ಕೆ ಬೇವಸಕ್ಕೆ
ರಾಮಬಾಣ ಮುದ್ದಿದು ;
ನೋಯಬೇಡ, ದುಗುಡಕೆಲ್ಲ
ಅಮೃತದಂಥ ಮುದ್ದಿದು !

ಎದೆಯು ನಿನ್ನ ಮೂರ್ತಿಯನ್ನು
ಧೇನಿಸುವುದು ಮದ್ಗತ !
ಮುದದಿ ವದನ ನಿನ್ನ ಹೆಸರ-
ನೆಂದು ಬಾಳ್ಗು—ಸಂತತ !

ದೇವಭಾವ ಬಿತ್ತಿ ಮನವ
ಹೂವ ಮಾಡಿಬಿಟ್ಟೆಯೋ !
ಜೀವವೆರಡನೊಂದುಮಾಡಿ
ನಂಬಿಗೆಯನು ನಟ್ಟೆಯೋ !

ನನ್ನ ನಲ್ಲ ಹೊಲ್ಲದೆಲ್ಲ
　　ಜಂಜಡಗಳ ಬಿಸುಟು ಬಾ !
ನನ್ನ ತೋಳ ತೊಟ್ಟಿಲಲ್ಲಿ
　　ವಿರಮಿಸಿತ್ತಲೆದ್ದು ಬಾ !

ದಣಿದ ಜೀವ ನಿನ್ನದೆನ್ನ
　　ರಮಣ, ಚಿತ್ತರಂಜನ !
ತಣಿವನೀಂಟು ಹೃದಯಶಯನ-
　　ನಾಗಿ ದುಃಖಭಂಜನ !

ಪ್ರೇಮರಸದ ಬಾನಗಂಗೆ
　　ನಿನ್ನ ಹೃದಯದಲ್ಲಿದೆ;
ಮೌನದಿಂದ ಮಿಂದು ಪಡೆದ
　　ನಲವನಿಲ್ಲಿ ಚೆಲ್ಲಿದೆ !

ನನ್ನ ಬಾಳ ಬೆಳಕೆ, ಭಾಗ್ಯ-
　　ಕುಂಕುಮಪ್ರಸಾಧನ !
ನನ್ನ ಜೀವ, ನನ್ನ ಭಾವ,
　　ಆತ್ಮಶಕ್ತಿಚೋದನ !

ಮಲಗು ಇಂದ್ರ, ಮಲಗು ಚಂದ್ರ,
　　ಮಲಗು ಭೀಮಚೇತನ !
ಮಲಗು ಬುದ್ಧ, ಮಲಗು ಸಿದ್ಧ,
　　ಮಲಗು ಪ್ರೇಮಕೇತನ !

ನೀಲ ನೀರದಾಂತರಾಳ--
　　ದಲ್ಲಿ ಮಿಡಿವ ಮಿಂಚೆ, ಬಾ;
ಕಾಲಕಾಲ, ಸತ್ಯ ಸುಂದ-
　　ರಾತ್ಮ ಮಲಗಲಿತ್ತ ಬಾ !

ಅರಸಿ ಕಾಣದರಸ ಮಲಗು
　　ತಣಿಸಿ ನನ್ನ ಪ್ರೇಮವ;
ಹರಸಿ ಹೊಕ್ಕು ಮಡಿಯ ಮಾಡು
　　ನನ್ನ ಹೃದಯಧಾಮವ !

# ಅಮರ ವಸ್ತು

ಕೆಂದುಟಿಯು ಮಾಸೀತು,
ಕೌಶೇಯು ಹರಿದೀತು,
ಮಣ್ಣಾಗಿ ಹೋದೀತು ಕಾಲ ಕೆಳಗೆ;
ಬೀಣೆತಂತಿಗಳೆಲ್ಲ
ಹರಿದಾವು, ಸುಸ್ವರವು–
ತೊದಲಾಗಿ ಪೈಶಾಚ ಕೇಕೆಯಕ್ಕು !

ರತ್ನಪಾತ್ರಗಳೆಲ್ಲ
ಚೂರು ಚೂರಾದಾವು,
ಬೆಳ್ಳಿಹಾವುಗೆ ಹರಿದು ಮೂಲೆ ಕಾಣ್ಗು !
ರನ್ನವಿಡಿಕೆಯು ಹೂಜಿ–
ಯೊಡೆದು ಪುಡಿ ಪುಡಿಯಕ್ಕು,
ಹಳೆಯದಾವುದೊ ರಾಜಗೃಹದ ಹಿಂದೆ !

ಹಾಲ್ಗಲ್ಲು ಬಿರಿದೀತು,
ಪರಿಮಳವು ಪರಿದೀತು,
ಬಂಗಾರಸೀರೆ ಹುಡಿಯಾಗಿ ಹೋಕು !
ಚೆಂಗುಲಾಬಿಯು ಬಾಡಿ
ಹೋಗಿ ಇಲ್ಲಾದೀತು,
ಉಳಿದೀತು ವಾಸನೆಯ ಸಿಪ್ಪೆ ಮಾತ್ರ !

ಯುಗ ಯುಗಗಳಳಿದಾವು,
ಸೊಬಗಳಿಯದೆಂದಿಗೂ,
ರಂಗು ದಂಗುಗಳಿಂದ ಕಂಗೊಳಿಸುಗು !
ಚಂದ್ರ ತಾರೆಗಳೆಲ್ಲ
ಕರಗಿಯೇ ಹೋದಾವು—
ಮೂಡದಿದ್ದಾವು ಆ ಬಾನ್ಮಣಿಗಳು !

ಈ ಮುತ್ತಿನೆಲ್ಲ ಸಿರಿ-
ಗಳು ಮಾಯುವಾದಾವು !
ಈ ನಶ್ವರಗಳೊಡನೆ ಸೊಬಗಳಿಯದು !
ಹೀಗೆಂದಿಗೂ ಚೆಲುವು
ನಮ್ಮಿಂದ ಹೋಗದೋ—
ಅದುವೆ ಮುತ್ತೈಯ್ದುಹುದು ಪಕ್ಕ ಬೀಸಿ!

ನೀನಾದ ಸೌಂದರ್ಯ
ನಿನ್ನದೆಂದೆಂದಿಗೂ,
ಮುತ್ತೆ ಮುತ್ತುದಯಿಸುಗು ನೋಡು ತಿಳಿದು !
ದೇವನೇ ಸೌಂದರ್ಯ,
ಅವ ಬಾಳ್ವನೆಂದಿಗೂ ;
ಅವನ ಪೂಜಿಪ ನೀನು, ಅವನ ಒಡತಿ !

ಏನ ಹೇಳಲಿ ಆ ವಿ-
ಚಿತ್ರವನು ಮುದ್ದು ರವೆ !
ಆಲಿಸುವ ಕಿವಿ ತುಂಬಿ, ಹೊಳೆವ ಕಣ್ಣ
ಆಲಿಗಳ ತುಂಬಿ ನಿಂ-
ತಿಹನನಾವೃತನಾಗಿ—
ಪ್ರೇಮವಾತನ ಮುಸುಕ ತೆರೆಯೆ ಕೂಗಿ !

(ಶ್ರೀ. ಜಿ. ಜಿ. ಅವರ ಕವನದ ಅನುವಾದ)

## ನನಗೆ ನಾನೇ

ಅನ್ನದಾಳ ನಿದ್ರೆಯಾಳ ನೋಟ ಬೇಟದಾಳವೋ,
ಅನ್ಯ ವಸ್ತುವಿಲ್ಲದಾಗ ಮಾತ್ರ ನನ್ನೊಳಾಟವೋ;
ತನ್ನ ಹೊಗಳಿದಾಗ ಹರ್ಷವರ್ಷಕಳೆತೆಯಿಲ್ಲವೋ,
ತನ್ನ ತಾಳದಂತೆ ಹೆಜ್ಜೆ ಇಟ್ಟರೆಲ್ಲ ಚೆಲ್ಲವೋ ! ೧

ಅಲ್ಲಿ ಇಲ್ಲಿ ಕಂಡು ಕೇಳಿ ಇಲ್ಲವೆಂದು ನೊಂದೆನೋ
ಅಂತೆ ದಿನವು ಸಾಗುತಿರಲು ಚಿನ್ನವಿತ್ತು ಗೆಳೆಯನೇ—
ಹರೆಯದಂಥತಮದೊಳೊಮ್ಮೆ ಪ್ರೀತಿಯೆಂದು ಕರೆದೆನೋ,
ಪ್ರೀತಿ ಬರಿಯ ಮೋಹವಾಯ್ತು, ಇದನು ತಾಳಲಾರೆನೋ!

ನನ್ನ ಹೃದಯದಾಳವನ್ನು ಕಂಡ ಹೃದಯವಿಲ್ಲವೋ;
ನನ್ನ ಕೂರ್ಮೆಯಿಂಪನಳಿದು ಮೆಚ್ಚುವವರ ಕಾಣೆನೋ!
ಚರ್ಮದಾಳ ನೇಹ ಹಗೆತನಕ್ಕು ಹೆಚ್ಚು ಘೋರವೋ,
ಬಿಟ್ಟುಬಿಡದೆ ಮುಟ್ಟೆ ಮುಟ್ಟದೊಲವು ವಿಷದ ಸಾರವೋ!

ಹಿಂದಿನವರು ದೇವಶರಣರಾದರೇಕೆ? ಹುಚ್ಚರು—
ಎಂದು ಹಾಸ್ಯಗೈದ ಬುದ್ಧಿಗಿಂದು ಬರೆಯು ಬಿದ್ದಿತೋ!
ಪ್ರೇಮದೀಪ್ತ ಹೃದಯ ತಣಿಯದಾಗೆ, ಲೋಕದೊಲ್ಮೆಯು
ಕಾಮವೆಂದು ಕೆಳಗೆ ತುಳಿದು ಮೇಲೆ ಮೇಲೆ ಹಾರಿತೋ!

ಇಲ್ಲಿ ನೇಹವೆಲ್ಲ ಮೋಹ ತನ್ನ— ಸೊಗಕೆ ವಿಡ್ಡುರ
ಬರುವವರೆಗೆ, ಬಂದರಾಗ ತಾನೆ ತಾನು, ನಿಷ್ಠುರ!
ಎಲ್ಲ ಮಾಯೆಯೆಂದು ತತ್ವವೇತ್ತರೆಂದುದಿಂತಹ
ಕಲ್ಲುತನವ ಕಂಡೆ, ಬಂದಿತೆನಗು ದುಃಖವಿಂತಹ!

"ಅಷ್ಟು ನೇಹವಿಷ್ಟು ಚಾಗ ಬೇಕು ಯೆನ್ನಲಾರು ನೀ?
ಅವಳಿಗವಳ ಚಿಂತೆಯಿರದೆ—ನಿನಗೆ ನಿನ್ನದೆಂತುಟೋ?
ಆತ್ಮ ತನ್ನ ತಾನೆ ಮೇಲಕೊಯ್ಯಬಲ್ಲುದಲ್ಲವೆ?
ಗೀತೆ ಹೇಳಲಿಲ್ಲವೇನು—ನಿನಗೆ ನೀನೆಯೆಂಬುದ!

ಅಳಲುಬಳಲು, ತಾಪಶಾಪ ಎಲ್ಲ ಪಕ್ವವಾಗದ
ನಿನ್ನ ಮನದ ಎಣ್ಣೆಗುದಿತ–ಅನ್ಯರೆಂತು ಕಾರಣ?
ಎಲೆಲೆ ಜೀವ ತಾಳು ತಾಳು, ನಿನಗದೇಕೆ ತಲ್ಲಣ?
ತಂದುದೇನು, ಒಯ್ವುದೇನು? ನಿನಗೆ ನಿನ್ನ ರೋದನ!"

ನನ್ನ ಭಾವನೆಗಳೆ ನನಗೆ ಬೇಡಿಯಾಗಿ ಹಿಡಿದವೋ,
ನನ್ನ ಕಲ್ಪನೆಗಳೆ ನನ್ನ ಮೈಯ ಕಟ್ಟಿ ಕೆಡೆದವೋ!
ನನ್ನ ಮನೆಯ ಜೋದಿಗೆಗಳೆ ನನ್ನ ಸಿಟ್ಟಿಗಿಂಧನ,
ನನ್ನ ಮನದ ಮೋಹ, ನೇಹ, ನನಗೆ ನಾಸೆ ಬಂಧನ!

ನನಗೆ ನಾನೆ ಅಹುದು ಗೆಳೆಯ ನಿನ್ನ ಮಾತು ನಿಚ್ಚಳ;
ಮನದ ಮೋಹವನ್ನು ಹರಿವ ವಜ್ರಸೂಚಿ ನಿಷ್ಠುರ!
ಸತ್ಯಕಿರುವ ರಮ್ಯತೆಯಿದು ಸತ್ಯವಾಗಿ ದುರ್ಧರ–
ಸತ್ಯಕಾಮನಾದೆನಿದಕೊ ಹಿಡಿದೆ ತಪದ ವಿಷ್ಟರ!

## ಗಾಂಧೀಮಹಾರಾಜ

ಗುರುಗಾಂಧಿಯನ್ನು ನಂಬಿರುವ ನಮಗೆ ಸಾ-
ಧನವಿದೊಂದೆ ಧೀರ,
ಬಡಜನರ ಸುಲಿದು ನಮಗಿಲ್ಲ ಬೊಕ್ಕಸವ
ಕೊಬ್ಬಿಸುವ ವಿಚಾರ!
ಧನಿಕರಿಗೆ ಬಾಗುವವರಲ್ಲ ನಾವು ಬರ-
ಲವರು ಮುಷ್ಟಿಯೆತ್ತಿ,
ಬಲ್ಗೋಲಿನಿಂದ ಬೆದರಿಸಲು ನಸುನಗುವೆ
ವೆಂದು " ನಿಮ್ಮ ಜುತ್ತಿ—
ಕೆಂಗಣ್ಣ ದಿಟ್ಟ ಕೂಸನ್ನು ನಿದ್ದೆಯಿಂ-
ದೊಮ್ಮೆ ಬೆಚ್ಚಿಸೀತು.
ಭಯಕಂಜಲೊಲ್ಲೆವೆಂಬೆಮ್ಮನೆಂತು ಆ
ಸಿಟ್ಟು ನಡುಗಿಸೀತು?
ಅತಿ ಸರಳ ಮಾತುಕತೆ ನಮ್ಮದಯ್ಯ, ಅ-
ಲ್ಲಿಲ್ಲ ವಕ್ರತಂತ್ರ—
ಅಲ್ಲಿಲ್ಲ ಕೈದಿಗಳ ಸೆರೆಗೆ ತರುವ ಶಾ-
ಸನದ ಜಟಿಲ ಯಂತ್ರ!
ಬಂದಿಗಳು ನೆರೆಯೆ ಸೆರೆಮನೆಯ ಬಾಗಿಲಲಿ
ದೋಷಲೇಪವಳಿಗು;
ಕಾಲ್ಬೇಡಿ ಸಡಿಲಿ ಗಾಂಧೀಜಿ ಹರಕೆ ಹಣೆ-
ಯಲ್ಲಿ ಮೂಡಿ ಬೆಳೆಗು!"

(ಡಿ. ರವೀಂದ್ರರ ಕವನದ ಅನುವಾದ)

## ದುಃಖಾಷ್ಟಕ

ಭಾರತದ ಶುಭ್ರಾಭ್ರ ಕೀರ್ತಿ ಕ-
ರಂಡವೊಡೆದಿತೆ ಸೋದರ!
ಭಾರತದ ಸತ್ವಪ್ರದೀಪಕ
ನಂದಿತೇ ಹಾಯ್ ಸೋದರ!
ಭಾರತದ ದಿವ್ಯಾತ್ಮ ತನ್ನವ-
ತಾರ ಮುಗಿಸಿತೆ ಸೋದರ!
ಭಾರತದ ಸತ್ಯಾದ್ರಿಶೃಂಗವು-
ರುಳ್ದುದೇ ಹೇ ಸೋದರ!

ಸತ್ಯವೇ ಸರ್ವಸ್ವವೆಂದ ಯ-
ತೀಶ್ವರನ ಕೊಲೆಗೆಯ್ದನೆ!
ಸತ್ಯರಂಗದದಮ್ಯ ಸತ್ಯಾ-
ಗ್ರಹಿಯ ಜೀವವನೊಯ್ದನೆ!
ಸತ್ಯಧರ್ಮದ ವೀರ ಯೋಧನ
ಷಂಢತನದಲಿ ಕೊಂದನೆ!
ಸತ್ಯದಮರಜ್ಯೋತಿಯೆತ್ತಿದ
ಕೈಗೆ ಸಾವನು ತಂದನೆ!

ಭಾರತದ ಚಾರಿತ್ರ ಕಿಂತಾ
ದ್ವಿಜಹತಕ ಮಸಿ ಬಳಿದನೆ!
ಭಾರತೀಯರ ಹೃದಯಕಮಲವ
ಚಿವುಟಿ ಥಟ್ಟನೆ ಹಿಳಿದನೆ!
ಭಾರತೋದ್ಧಾರಕನನನ್ಯಾ-
ಯಾಗ್ನಿಗಾಹುತಿಯಿತ್ತನೆ!
ಭಾರತಸ್ವಾತಂತ್ರ್ಯವೀರನ
ಕೊಂದು ಬದುಕಿಯು ಸತ್ತನೆ!

ಹಿಡಿದಹಿಂಸೆಯು ಜೀವಕೋಟಿಯು
ಹೊರೆದ ಜನಕನು ಶತ್ರುವೆ ?
ಬಿಡದಹಿಂಸೆಯು ಪಾಪಿಗಳನು-
ದ್ಧರಿಸಿದಾತನು ಶತ್ರುವೆ ?
ದುಡಿದಹಿಂಸೆಗೆ ಸರ್ವವನ್ನ-
ರ್ಪಿಸಿದ ಚಾಗಿಯು ಶತ್ರುವೆ ?
ನಡೆದಹಿಂಸೆಯ ಹಾದಿಯಲಿ ದೇ-
ವತ್ವಕೇರ್ದವ ಶತ್ರುವೆ ?

ಹಿಂದುಮುಸ್ಲಿಮರೊಂದುಗೂಡಿಸಿ
ನೇಹವೆರೆದವ ದುಷ್ಟನೆ ?
ಹಿಂದಕಟ್ಟಿ ಸಶಸ್ತ್ರರಿಪುಗಳ
ನಾಡ ಕಾಯ್ದುವ ದುಷ್ಟನೆ ?
ಹಿಂದುಧರ್ಮದ ಶಾಂತಿದೂತ್ಯವ
ವಹಿಸಿದಾತನರಿಷ್ಟನೆ ?
ಹಿಂದುಗಳ ಹಿರಿಮಣಿ ದಯಾಘನ
ಗಾಂಧಿ ಹಿಂದುಗನಿಷ್ಟನೆ ?

ಹಿಂದುಗಳ ದುರ್ಭಾಗ್ಯಕೆತಿಮಿತಿ-
ಯುಂಟೆ ಹೇಳೈ ಸೋದರ ?
ಹಿಂದುಳಿದವರ ತಬ್ಬಲಿತನ-
ಕ್ಕೆಲ್ಲೆಯುಂಟೇ ಸೋದರ ?
ಹಿಂದೆ ಕುರುಶಾರ್ದೂಲ ಭೀಷ್ಮನ
ಕೊಂದ ಷಂಢನ ಮೀರಿಸಿ,
ಇಂದು ಭಾರತಪಿತನ ಕೊಂದನೆ
ಪಾಪಿ ಗುಂಡನು ಹಾರಿಸಿ ?

ಅಕಟಕಟ ದುಃಖಾಬ್ಧಿ ವೀಚಿಹೃ-
ದಂತರಾಳವ ಹೊಕ್ಕಿತೋ !
ಅಕಟ ಸಂತಾಪಾಗ್ನಿ ಕೇಸುರಿ-
ಗೊಂಡು ದೆಸೆಗಳ ನೆಕ್ಕಿತೋ !

ವಿಕಟಚರಿತನನೆಣಿಸಿ ರೋಮಗ-
ಳೆದ್ದು ಕಿಸುಳಗಳಾದುವೋ !
ಅಕುಟಿಲನ ಮರಣಕ್ಕೆ ಮರುಗಿದ
ಕರಣ ಹಸುಳೆಗಳಾದುವೋ !

ಸತ್ತು ಬದುಕಿದ ದಿವ್ಯಮಾನವ-
ನಾತ್ಮ ಪಜ್ಜ್ವಳಿಸುತ್ತಿದೆ !
ಸತ್ತು ಸಾಯದ ಕೀರ್ತಿಕಾಯದ
ಕಾಂತಿ ಕಜ್ಜಳ ಕಳೆದಿದೆ !
ಸತ್ಯಮತ್ತಮಹಿಂಸೆ ಮಂತ್ರಗ-
ಳುಲಿಯಲ್ಕೆ ದಶದಿಶೆಯಲಿ !
ಸತ್ಪಥಧ್ರುವತಾರೆಯಾದ ಮ-
ಹಾತ್ಮ ತಣಿವನು ಕಾಣಲಿ !

## ಸುಂದರಿಯ ಸಂಕಟ

ನಾ—ನಕ್ಕರು ಚೆಂದ
ಅತ್ತರು ಚೆಂದ
ಎಂಬನಲ್ಲ ನಲ್ಲ !   ॥ ಪಲ್ಲ ॥

ದುಃಖಿಸುತಿದ್ದರು ದೂರದಿ ನಿಲುವನು
ರಸದಾಸ್ವಾದವದಂತೆ !
ಹಸ್ತವನೀಯನು ಬಿದ್ದರೆ, ನೋಡುತ
ಚಿತ್ರವ ಬರೆದಪನಂತೆ !

ಮಾತಿಗೆ ಮಾತಾಡದೆ ಮುಖ ನೋಡುತ
ಕೂತಿರುವನು ಕೇಳಿದರೆ—
ನಾ ತೆರೆದರೆ ಬಾಯುರಳುವ ತಾವರೆ
ಕಂಡಂತಾಗುವುದಂತೆ !

ಮುದ್ದಿಗೆ ಮುದ್ದನು ಕೊಡದೆ ಘಟಕ್ಕನೆ
ಮಾಯಾಬದ್ಧನ ಹಾಗೆ
ಮುಗ್ಧಾಕ್ಷಿಗಳನು ಬಿರಿವನು ಪ್ರಣಯವಿ-
ದಗ್ಧತೆಯೇನಿದು ಹೇಗೆ?

ಒಲವನು ತೋರಲದೇ ಹೆಚ್ಚೆಂಬನು
ಪೂಜಿಸಬಂದಪನಯ್ಯೋ!
ಈ ತೆರದೀ ದೇವತೆಯಾಗಲು ಸಾ-
ನೀತನ ವರಿಸಿದೆನೇನು?

ನನ್ನೀ ಹೃದಯದ ಕರೆಗೋಗೊಡದೀ-
ಯನ್ಯಾಯಕ್ಕೇನೆಂಬೆ!
ನನ್ನೊಲ್ಲವು ಚೆನ್ನಾದುದು ನಿಜವೇ?
ಆದರದೆನ್ನಯ ತಪ್ಪೆ?

ನಕ್ಕರೆ ಹಾಸ, ವಿಲಪಿಸಲು ಶೋಕ, ಅ-
ದಚ್ಚರಿ ಕಣ್ದೆರೆದೊಡನೆ;
ನಿಶ್ವಸಿಸಲು ನಿರ್ವೇದವುಸಿರ್ ನಿಲೆ
ಮೋಹದಶಾವಿಧವಂತೆ!

ನಡೆದರೆ ತಡೆಯುವ, ನಿಲೆ ಕೂರೆನ್ನುವ,
ಕುಳಿತರೆ ವಿಶ್ರಮಿಸೆಂಬ
ಅತ್ಯಾದರದುಪಚಾರದೆ ಬಳಲಿದೆ-
ನಯ್ಯೋ ಬಾರಿಪರಿಲ್ಲ!

ನಿಜವಿರಬಹುದಾತನ ಸೊಬಗುಣಿತನ,
ಅದು ನನಗುರುಳಾಯ್ತೆಂದು;
ಭಜಕನು ನಲ್ಲನೆ? ಭಕ್ತಿ ಪ್ರೇಮವೆ?
ಪೂಜ್ಯವೆ ರಮ್ಯತೆಯೆಲ್ಲ?

ಸತಿಯಾಗಿರಲೆಳಸಿದ ನನಗೀ ಪೂ-
ಜ್ಯತೆಯುರುಳಿನ ಸೆರೆ ಸಾಕೋ—
ಇತಿಮಿತಿಯಿರದೀ ನಾಟಕರಾಜ್ಯದ
ಅತಿಸುಖ ಸೇರದೊ ನನಗೆ!

ಹಾ ಹೃದಯವೆ, ಹಾ ಪ್ರೇಮವ ಕಾಣದೆ
ಕಂಗೆಟ್ಟೆಯ ಬಡವಸ್ತು ?
ಹಾ ಹಾ ರೂಪವೆ, ಮೃತ್ಯುವೆನಿಸಿತೇ ?
ಬಾಳೇ ನೀರಸವಾಯ್ತೇ ?

## ನೀನಿಲ್ಲ ಅಲ್ಲಿ

ಎಲ್ಲೆಲ್ಲು ಇರುವೆಯೆಂದರಸಿ ಸುರಿಸಿದೆನು ಬೆವರನಷ್ಟು ಬರಿದೆ
ಅಲ್ಲಿಲ್ಲ ನೀನು ಸಚ್ಚಿದಾನಂದದಲ್ಲಷ್ಟೆ ಮೂಡಿ ಹರಿವೆ ‖ ಪಲ್ಲ ‖

ನೀನಿಲ್ಲ ಅಲ್ಲಿ ಕುತ್ಸಿತ ವಾಕ್ಯಂಗಳ ಬಳಸುವಲ್ಲಿ ಗುರುವೇ
ಅಲ್ಲಿಲ್ಲ ನೀನು ನಾಣಿಲಿಗಳ ಕುಹಕದ ಕೂಟದಲ್ಲಿ ಗುರುವೇ;
ಇಹನಲ್ಲ ನೀನು ಮಾತ್ಸರ್ಯದ ಸರಿ ಸುರಿವಲ್ಲಿ ದಿವ್ಯಹೃದಯ
ಬಹನಲ್ಲ ಬುದ್ಧಿಗೇಡಿಗಳು ಬಹಳ ಮಾತಾಡುವಲ್ಲಿ ಸದಯಾ

ಕಲಹಗಳ ಹೂಡುವಲಸಿಗರ ತಂಡದಲಿ ಕಾಣಲಾರೆ ನಿನ್ನ
ಕಪಟಗಳು ಪರಭೃತರು ಕಾಕಪ್ರೋಕರೆಲ್ಲಲ್ಲಿ ಸಿಕ್ಕದನ್ನ;
ಅತಿ ಶುದ್ಧ ಬುದ್ಧ ಪರಿಪೂರ್ಣ ಸಚ್ಚಿದಾನಂದರೂಪದೊಲವೇ
ಸ್ಥಿತಿಗತಿಗಳರಿತು ಸಜ್ಜನರ ಕೈಯ ಹಿಡಿದೊಯ್ವ ದೇವಬಲವೇ !

ಹರಿಹರ ಬ್ರಹ್ಮರಾಧಾರ ಶಕ್ತಿ ಓನ್ನವೋ ವಿಶ್ವಸೂತ್ರ
ನರಹೃದಯದಲ್ಲಿ ಕಾರುಣ್ಯವಾಗಿ ಕೆಲವೊಮ್ಮೆ ಬರುವ ಪಾತ್ರ;
ರಿಸಿಮುನಿಗಳೆಂಬರೆಲ್ಲೆಲ್ಲು ಇರುವೆ ನೀನೆಂದು ಸುಳ್ಳೆಸುಳ್ಳೆ
ಕಸ ಕಡ್ಡಿ ಕನಕ ಕಲ್ಹಾರ—ಒಂದೆಯೇ–ನೀರು ನೀರುಗುಳ್ಳೆ

ಮನಬುದ್ಧ್ಯಹಂಕೃತಿಗಳಿರುವ ವರೆಗೆ ಬೇರಿಲ್ಲ ನೋಟ ನಿನ್ನ;
ಜನರೇನು ಹೇಳಿದರು ದಿವ್ಯದರ್ಶನವೆ ? ಕಂಡನಾವನದನ ?
ಆಕಾಶದಗಲದರವಿಂದದಂತೆ ನಿನ್ನೆದೆಯೊ ವಿಶ್ವ ದೇವಾ
ಆಕಾಶಶುಭ್ರದೆದೆಗನ್ನಡಿಯಲಿ ಚುಂಬಿಸು ಮಹಾತ್ಮಭಾವ !

# ನರನಾದೆನೇಕೆ?

ನರನಾದೆನೇಕೆ ಅಯ್ಯಯ್ಯೊ ನಾನು ಹರನಾಗಲಿಲ್ಲವೇಕೆ?
ಶರಶಾಪಶಕ್ತಿಗಳನಲ್ಲೆ ಬಿಟ್ಟು ನಾ ಬರಿದೆ ಬಂದೆನೇಕೆ? ॥ ಪಲ್ಲ ॥

ನೌಖಾಲಿಯಲ್ಲಿ ಕಣ್ಣಾಲಿಯಲ್ಲಿ ಪಡಿಮೂಡಿದಳಲ ಕಂಡು
ಬೊಂಬಾಯಿಯಲ್ಲಿ ಬಡಹೃದಯ ದುಃಖಿಸುವ ಬಗೆಯ ನೋಡಿಕೊಂಡು;
ಜಿನತತ್ವ ಬೆಳಗಿದೀ ಭರತಖಂಡದಲ್ಲನ್ಯ ತತ್ವ ಬಂದು
ಕೊನೆಯಿರದ ನರಕವೆಸಗಿಹುದ ತಿಳಿದು ನಾ ಬದುಕಲೇತಕೆಂದು?

ಬಿಂಗಿಯಾಪೆನೇ
ಸಿಂಗಿಯಾಪನೇ

ಆ ಹರನ ಹಣೆಯ ಹೊಸ ಹಗ್ಗಿಯಾಗಿ ಭುಗ್ಗೆಂದು ನಿಲ್ಲಲೇನು?
ಈ ದುರುಳತನವ ಸುಟ್ಟೊಗೆಯುವುಲ್ಕವನು ನಭದಿ ಎತ್ತಲೇನು?

ಎಂಟು ಗೇಣಿನೀ ದೇಹ ಸಾಲದೋ
ಕುಂಟು ಕೈಗಳಿವು ಬಂಟರಾಗವೋ
ಅಲ್ಪವಾಯ್ತು ನರಶಕ್ತಿಯಿಂದು ಹಾ!
ಜಲ್ಪಿಸುವರ ಬಾಯ್ಬಡಿವ ಶಕ್ತಿ ಬಾ!
ತಡವೆ, ತಡವೆ, ತಡವೆ?
ನಾ ತಡೆಯೆ, ತಡೆಯೆ, ತಡೆಯೆ!

ಅಹ! ಮಾನಧನರ ಅಭಿಮಾನಮಣಿಯ ಕಿತ್ತೆಸೆದು ತುಳಿಯುವಂಥ
ಆ ಹೀನ ಛಲವ ಬಣ್ಣಿಸಲು ಬರದು ಸೈತಾನ ನಾಚುವಂಥ!
ಹಸುಗೂಸು ಹಡೆದ ತಾಯಂದಿರೆಳೆದು ಮೊಲೆ ತರಿವ ಹೀನ ಬಗೆಯ
ಹಸಿ ಪುಂಡತನದ ಘೋರ ಪ್ರಕಾರಗಳ ಕೇಳಿ ಬಿಟ್ಟೆ ಡಗೆಯ!

ನೆತ್ತರುರಿಯಿತೋ
ರೋಮ ನಿಮಿರಿತೋ

ಧಮುಸಿ ಧಮನಿಯಲಿ ಧೂಮಕೇತುಗಳು ದಾಳಿಯಿಟ್ಟಹಾಗೆ
ಸಮನಿಸಿತ್ತು ಸರ್ವಾಂಗದಲ್ಲಿ ಸುಟ್ಟುರಿಯುವಂಥ ಬೇಗೆ!

ಗಗನದಗಲ ಹೊತ್ತಿಗೆಯು ಸಾಲದೋ
ಬರೆಯೆ, ನಗ್ನಭೂತಪ್ರಕೋಪವೋ !
ಬರಿ ನರತ್ವವಿದ ನಿಲಿಸಲಾರದೋ
ತೆರೆಯದೇಕೆ ಬಾಯ್ ಧರೆಯು ನಿಂದುದೋ?
ಸಹಿಸೆ, ಸಹಿಸೆ, ಸಹಿಸೆ—
ಹಾಯ್ ದುರ್ಮದಾಗ್ನಿ ದಹಿಸೆ !

ಯಮಲೀಲೆಯಲ್ಲ, ನರಕಕ್ಕು ಹೊಲ್ಲದನ್ಯಾಯ ನಡೆಯಿತಣ್ಣ !
ಸುಮಕೋಮಲೆಯರ ಮರ್ಮಗಳ ಭೇದಿಪರ ಸುಡಿಸಬೇಕು ಕಣ್ಣ !
ಮನುಜತ್ವವಿರದ ಕಲ್ಲೆದೆಯ ಕಾಳತನ ಕಂಡಿತೀಗ ಲೋಕ ;
ಮನದಲ್ಲಿ ಚಿತ್ರಿಸಲಶಕ್ಯ ಕವಿಗು ಈ ದುರ್ನಿವಾರ್ಯ ಶೋಕ !

ವಿಷವ ನುಂಗಲೇ
ವಿಲಯವೆಸಗಲೇ

ಕ್ಷುದ್ರನಾಗಿ ಅವತರಿಸಿ ಬಂದ ನಾ ರುದ್ರನಾಗಲೆಂತು ?
ಅದ್ರಿಯನ್ನೆ ಪುಡಿಯೆಸಗುವಂಥ ವರ ವಜ್ರ ದೊರೆವುದೆಂತು ?

ಮಾವಿನಂಥ ಈ ಹೃದಯ ಸಾಲದೋ
ಸಾವಿಗಂಜುವೀ ಬುದ್ಧಿ ಬೇಡವೋ--
ಏಳಬೇಕು ಪಾತಾಳ ಸಗ್ಗಗಳ
ಮೇಳವಿಟ್ಟ ದೀರ್ಘಸ್ವರೂಪದೊಳ್ !
ಏಕೆ ತಡವು, ತಡವು ?
ನಿನಗಿಲ್ಲ ಆತ್ಮ ಬಿಡುವು !

## ಕಡೆಯ ಉತ್ತರ

ಬಂದೆ ಬಂದಾಗ ಹಾಡಿದೆ
ನಾ। ಹೋದೆ ಹೋದಾಗ ನೋಡಿದೆ ॥ ಪ ॥

ನಿ। ನ್ನಿಷ್ಟವೇನೆಂದು ಕೇಳಿದೆ
ನನ। ಗಿಷ್ಟವಿಲ್ಲವೆಂದುಸುರಿದೆ;
ದೃಷ್ಟಿಶಲ್ಯವೆದೆಗಿಟ್ಟು ಬಸವಳಿಸಿ
ಕುಟ್ಟಿ ನನ್ನ ಕನಸುಗಳ ಚೆಲ್ಲಿ, ಪಸಿ-
ದೆಷ್ಟು ಬೇಡಿದರು ಇಕ್ಕದೊಲವ, ಕಸಿ-
ದೊಕ್ಕಲಿಕ್ಕಿದರಗುವರಿ ನಿನಗೆ ನವೊ— ಬಂದೆ....

ನಾ। ಬಂದ ಬರವ ಸ್ವಾಗತಿಸಿದೆ
ನ। ನ್ನೆದೆಯ ಬಳಿಕ ನೀ ಮಥಿಸಿದೆ;
ಕಂದನಂಥ ಮನ ನಿನ್ನದೆಂದು ಮೇ-
ಣೊಂದು ನಿಮಿಷ ವೈಮರೆದು ನೋಡಿ ಹಾ-
ದೆಂದೆನಾದರರೆಗಳಿಗೆಯಲ್ಲಿ ನಾ
ಮಂದಬುದ್ಧಿಯೆಂಬರಿವನಿತ್ತೆಯಹ— ಬಂದೆ....

ಕರೆ। ಸಿಯೂ ಕರೆಯ ನೀ ಮರೆಸಿದೆ
ಬೆರ। ಸುವುದಕಾಗ ಬೇಸರಿಸಿದೆ;
ಬರೆಸಿದೋಲೆಯನು ಸ್ಮರಿಸದಾದೆ ವಿ-
ಸ್ತರಿಸಲೇನನರವಿಂದವದನ ಪಾ-
ದರಿಯ ಜೆಡಗನೊಡಗೊಂಡು ಬೇರೆ ಮಾ-
ದರಿಯ ಸೊವಡ ಸೂಸಿತ್ತು ಭಲೆರೆ ಭಲೆ— ಬಂದೆ....

ಆ। ಮಾನವೀಗೆಲ್ಲಿ ಕಳಿಸಿದೆ?
ಅದು। ದಹುದು ನೀನೆಮ್ಮನುಳಿಸಿದೆ!
ಚಂಚಲೆಯರ ಚೆಲುವಿಕೆಯ ಮೋಹಕತೆ
ಮಿಂಚಿನಂತೆಯೆಂಬರಿವನಿತ್ತ ಗುರು
ಮುಂಚಿನುದ್ಯದಭಿಮಾನಹೇಮ ಬರಿ
ಕಂಚಿನಷ್ಟು ಬೆಲೆಗಿಳಿಯಿತೇಕುಸಿರೆ?— ಬಂದೆ....

ಬೇ। ಕೆನ್ನದಾದೆ ಕರೆದಿರೆ ಸುಧೆ
ಬಿಡ। ತನವ ಜರೆದೆ ಗುಣವರಿಯದೆ

ಮುತ್ತುರತ್ನಮಾಣಿಕ್ಯದೊಡೆಯನನು
ಮೆಚ್ಚಿ ಕೈಯ ಹಿಡಿದಿರುವ ಭಾಗ್ಯವತಿ
ಇಚ್ಛೆ ಪೂರಯಿಸಿದಾಗ ಹೃದಯದಾ
ಹುಚ್ಚುಪ್ರೀತಿ ಬೇಕೆಂದು ನೆನೆಸುವರೆ?— ಬಂದೆ...

ಕ। ಣ್ಣೀರ ಕರೆಯುದಿರು ತಡೆ ತಡೆ
ನೆನೆ। ದೇನು ನಾನು ಹಿಡಿವೆನು ಕೊಡೆ!
ಬಡವ ನಾನು ಬಯಲಪ್ಪ ಶೀತ ನನ-
ಗಡಸಿತೆಂದರಾರೈವರಾರಕಟ!
ಸಿರಿಯ ಕಣಜದಧಿದೇವಿ ಕಾಯೆ ನಾ
ಶರಣು ಬಂದೆ ಸೆರಗೊಡ್ಡಿ ಬೇಡುವೆನು— ಬಂದೆ...

ವರಿ। ಸಿದನ ಹಿಂದೆ ನೀ ನಡೆ ನಡೆ
ಮು। ತ್ತೇನು ನಿನಗದೆಲ್ಲಿಯ ತಡೆ?
ಉತ್ಸವೋತ್ಸವಗಳುತ್ಸದಲ್ಲಿ ನಿಂ
ದುಚ್ಚಪೀಠದಲಿ ಕುಳಿತು ಕೈಯ ಹಿಡಿ-
ದಚ್ಚ ಭಕ್ತನರ್ಚಣೆಯ ಪಡೆಯಲಿಹ
ಅಚ್ಚರಸೆಯ ವೈಭವಕೆ ದೊರೆಯಿಹುದೆ?— ಬಂದೆ...

ಕೈ। ಹಿಡಿದು ನಾ ನಿನ್ನ ಬೇಡಿದೆ
ಮುಳಿ। ದಬ್ಬ ನೀ ನೋಡದೋಡಿದೆ!
ಸಿರಿಯ ನಗರದಟ್ಟಾಲಿಕೆಯಲಿ ನಿಂ-
ದಿರಿಯೆ ತರುಣ ಜನರೆದೆಯ ನಕ್ಕು ಗೆಳ-
ತಿಯರ ಕೂಡ ಪರಿಹಾಸ ಗೈದ ಸುಖ-
ದನುಲನೊಮ್ಮೆ ನೆನೆ ಕಮಲಗಂಧಿ ನೀ— ಬಂದೆ...

ಆ। ನಾಚ ನೀನೆಷ್ಟು ನಡೆಸಿದೆ
ನ। ನ್ನಾಸೆಯನ್ನು ಕುಡಿಚಿವುಟಿದೆ
ತಿರುಕನಾಗಿ ಮನೆಮುರುಕನಾಗಿ ಕಳಿ-
ಯೆರಕವೊಂದ ಸಾಧಿಸಿದ ಜೀರ್ಣ ಮುಖ-
ದೆರಕೆಯಿಲ್ಲವೆಳಗಿಳಿಯು ಕಟ್ಟಿಕೊಂ-
ಡಿರುವ ಪರಸಿಗೆನಗೇಕೆ ದೊರೆಯಿಹುದೆ?— ಬಂದೆ...

ಹಾ ! ನೆನೆದೊಡೆದೆಯೆ ಬಿರಿದೊಡೆವುದು
ಸಂ ! ತಾಪದಂಗಾರ ಸುಡುವುದು !
ತರುಣಯೌವನಕುಠಾರ ತರುಣಿಯೆಂ-
ದುರಿದು ನುಡಿದ ಬಿಂಕಕ್ಕೆ ವಂದಿಸುವೆ
ಹರಿಹರಾದಿಗಳ ಹಿಡಿದ ಮಾಯೆ ನೀ-
ನರಿಯದವರ ಹಾಗೇಕೆ ರೋದಿಸುವೆ?— ಬಂದೆ....

ಛೀ ! ಶ್ರೇಯವಿಲ್ಲ ನಾ ನಿಂತರೆ
ಕ್ಷಮಿ ! ಸಿನ್ನ ನಿನಗೇಕೆ ತೊಂದರೆ ?
ರಮಣಿ ನಡೆವೆ ಕೊಡು ಹೋಗಲಪ್ಪಣೆಯ
ರಮಿಸಲೇನು ನಿನ್ನವನೆ ನಾನು ? ಕೃಪೆ-
ಯಿರಲಿ ದೀನನಲಿ ನಮೋ ಕ್ಷೀರಸಾ-
ಗರದಿ ನೀರ ಹನಿಗಿಂಬನಿತ್ತು ಪ್ರೊರೆ !— ಬಂದೆ....

## ಸೌಂದರ್ಯಪೂರ

ಸೌಂದರ್ಯಪೂರವ
ಕಂಡೆ ಕಾರವಾರವ ॥ ಪ ॥

ಕರಿಗುದುರೆಯು ಮರಿಗಳಂಥ
ಸಾಲು ಸಾಲು ಗಿರಿಗಳ
ಹರೆಯುವ ಮೋಹಿಸುವ ಪಶ್ಚಿ-
ಮಾಬ್ಧಿಯ ಮೆಲ್ದೆರೆಗಳ
ನರ್ಮಸಚಿವತನದ ಸನ್ನೆ-
ಸೂಕ್ಷ್ಮದುಲಿಯನರಿತು ನಡೆವ
ಚೆಲ್ಲಗಾರ್ತಿಯರನು ಬಲ್ಲ
ರಸಿಕರಂಗರ
ಒಲ್ಲೆ ಒಲ್ಲೆ ಎಂದರೂನು
ಒಲಿಸಿಕೊಳ್ಳಲನುವಾಗುವ

‘ ಸಹ-ಗಮನ ’ ಸಮಾಗಮಗಳೊ
ನಿತ್ಯ ಸುಂದರ !
ಬಾರೊ ಬಾರೊ ಮೈಸೂರ
ರಸಿಕಸಿಂಧುರ !

ಸಾಗರವೇ ಕೆರೆಯಾಗಿದೆ
ಕಾರವಾರದೂರಿಗೆ
ಆ ಕನ್ನಡಿಯಲಿ ಕಾಣುವ
ರಸಿಕ ಜನರ ಸೊಬಗಿಗೆ
ಅಂತಃಪಟ ಹಿಡಿದ ಹಾಗೆ
ಹಬ್ಬಿ ಬೆಳೆದ ಹಸಿರ ಮೇಗೆ
ಕಂಚುಕಿಗಳ ಕಜ್ಜಗೈವ
ಭೂಧರನಿಕರ !
ಅಂತರಂಗದಲ್ಲಿ ತಣಿವ
ಬೇಡಿದಷ್ಟು ತುಂಬಿಕೊಡುವ
ಶಾಂತವಾದ ರೂಪಶ್ರೀ-
ಮಂತ ಬಂದರ !
ನೋಡ ಬಾರೊ ಧಾರವಾಡ-
ದೂರ ಸುಂದರ !

ಹಗಲಿರುಳೂ ಮಂದ ಮಂದ
ಪವನನಾಟ ಪಾಠವೊ
ಚಂದ್ರಕಾಂತಿ ತೆರೆದೆದ್ದಿರೆ
ಪ್ರೇಮಿಜನರ ಬೇಟವೊ !
ಸಗ್ಗವೆಂಬುದಿದ್ದರೂನು
ಹಚ್ಚಿ ಕಿಚ್ಚನದಕೆಂಬೆನು;
ಮಚ್ಚರಿಸದ ರಸಿಕರುಂಟೆ
ರಸಜೀವನಕೆ ?
ಶಾಂತಿರಸದ ತವರು ಕಣೋ—
ಜೊತೆಗೆ ಪ್ರೀತಿಯಿರಲು ಬಾಳು

ಸೂರು ವರುಷ ಕಡಿಮೆಯಕ್ಕು !
ನೋಡದೆ ಬದುಕೆ ?
ಮಂಗಳೂರ ಗೆಳೆಯ ಹೊರಡು
ತಡವದೇತಕೆ ?

# ಮಧುರಾವಟಿ

ಮಧುರಾವಟಿಯನು ಮಾರುವ ವೈದ್ಯನು
ಬಂದಿಹೆ ನೋಡಿದಿರಾ ?
ಮಧುರಾಧರದ ಕುಮಾರರೆ ಮುಗ್ಧರೆ
ಕೊಳ್ಳಿರಿ ಸುಲಭ ದರ ! ॥ ಪ ॥

ಮಧುರಾವಟಿಯನು ಮಾರುವ ವೈದ್ಯನು
ಎದೆನೋವನು ಪರಿಹರಿಸುವ ಭಿಷಜನು
ಬಂದಿಹೆ, ಹಾಕಿಸಿ ಯೋಗಾಸನಗಳ
ಹೊಂದಿಸುವೆನು ಆನಂದದ ಪದಗಳ !
ಮಕ್ಕಳೆ ಬನ್ನಿರಿ ಮರಿಗಳೆ ಬನ್ನಿರಿ
ಬೇಕಾದವರೆಲ್ಲ ;
ಸಿಕ್ಕದಿದಿನ್ನೆಲ್ಲಿಯು, ಇದರೆದುರಿಗೆ
ಸಕ್ಕರೆ ಸಿಹಿಯಲ್ಲ !

ಪ್ರೇಮಿಗಳೆನ್ನುವ ದೇವತೆಗಳ ಸಾ
ಧೇನಿಸಿ ಧೇನಿಸಿ ಪಡೆದಿಹೆನಿದನನು-
ಮಾನಕೆ ಸಿಗದಿದು ' ನಾನೋ ನಾನೆ 'ಂ
ದೋಡುತ ಬಂದಿದ ಬೇಡುವ ಚೆನ್ನಗೆ-
ಕಿಂದೊಡನೆಯೆ ಹಾಲೂಡಿಸಿದರೊ ಎನೆ
ಸುಖ ಸಂಭವಿಸುವುದು ;
ನಿಂದೊಡನೆಯೆ ಚಟುವಟಿಕೆಯು ಬರುವುದು
ಮುಖ ತಾನರಳುವುದು !

ಮುನಿಸಾಂತವರಿಗೆ ಮೊದಲನೆ ಮದ್ದಿದು,
ಅಸಮಾಧಿಗಸಾಮಾನ್ಯದ ಔಷಧ !
ಬೆಂಣ್ಣೆಯು ತಿಂದಂತಿರುವುದಿದರ ಸವಿ;
ನುಣ್ಣಗೆ ತಣ್ಣಗೆ ಮೆಲ್ಲಗೆ ತಿಂದರೆ !
ವಿಜ್ಞಾನಿಯು ಸಂಶೋಧಿಸಿ ಕಾಣದ
ರಾಸಾಯನ ಪಾಕ,
ಅಜ್ಞನು ಮೂಸಿದರೂ ಸಹ ಅವನಿಗೆ
ತೆರೆಯದಿರದು ನಾಕ !

ಕಣ್ಣಿಗೆ ಕಾಣದ ಕಮಲದ ಮುಗುಳನು
ಬಣ್ಣಿಸಲಾಗದ ಬಣ್ಣದಿ ಸೇರಿಸಿ
ಪ್ರೇಮೋದಧಿಯಲಿ ಸಿಕ್ಕಿದ ಸುಧೆಯಲಿ
ಬತ್ತಿಸಿ ಮಾಡಿದ ಮಧುರಾವಟಿಯಿದು !
ಕನ್ನಡ ಹಳ್ಳಿಗ 'ರೊಲುಮೆಯ ಗುಳಿಗೆ' ಯಿ-
ದೆಂಬರು, ಹೆಚ್ಚೇನು—
ಬಲ್ಲವ ಬಲ್ಲನು, ಮಾಧುರ್ಯಾಂಶದಿ
ಕಡಿಮೆಯು ಹೆಜ್ಜೇನೂ !

ರಮಣೀಯತೆಯುದ್ಯಾನದ ಲತೆಗಳೆ,
ರಮಣೀರಮಣರ ಪ್ರೇಮದ ಫಲಗಳೆ,
ನಿತ್ಯವು ಒಂದೊಂದೀವೆನು ಬನ್ನಿರಿ,
ಮತ್ತೇತಕೆ ತಡ ? ಕೊಳ್ಳಿರಿ, ಕೊಳ್ಳಿರಿ !
ಅಂಕಾಸನದಲಿ ಕುಳ್ಳಿರಲೊಪ್ಪುವು-
ದೊಳ್ಳಿತು; ಕಡೆಗೆಲ್ಲ
ತಕ್ಕೊಂಬರ ತುಟಿ ಘಟ್ಟನೆ ನಾಲ್ಕಹು-
ದಂಜಿಕೆಗೆಡೆಯಿಲ್ಲ !

# ಆಸೆ

ಆಸೆ, ಪ್ರೀತಿಯ ಆಸೆ, ಹಿರಿಯಾಸೆ, ಸಿರಿಯಾಸೆ,
ಬಸಿರಾಸೆ, ಉಸಿರಿನಾಸೆ;
ಆಸೆ— ಕಣ್ಣಾಸೆ, ಕಿವಿಮೂಗುನಾಲಗೆಯಾಸೆ,
ಮೈಯಾಸೆ, ಮನದ ಆಸೆ;

ಆಸೆ ಮತ್ತೆನ್ನ ಮನ ಹಾಸುಹೊಕ್ಕಾಗಿಹವು
ಹುಟ್ಟುದಂಪತಿಗಳೆನಿಸಿ;
ಆಸೆಯೆನ್ನಂತರಾತ್ಮನ ಬಾಸೆಯಾಗಿಹುದು
ವಿಶ್ವವನೆ ತನ್ನದೆನಿಸಿ!

ಭವಿತವ್ಯತೆಯು ತೆರೆವ ಭಂಡಾರದಧಿಕಾರಿ—
ಹೊಂಗನಸುಹೂವಿನ ವನ!
ನವನವೋನ್ಮೇಷತಾರೆಗಳ ತವರೂರಕ್ಕು,
ಸಂತೋಷರತ್ನಸದನ!

ಕಲ್ಪನೆಯು ನೆಲಗಟ್ಟು, ಪದೆಪಿನಾ ತಲೆಗಟ್ಟು,
ಸಮಚಿತ್ತಕಿರುವ ಮಟ್ಟು;
ಜೀವನದ ಜೀವವದು, ಭಾವನೆಯ ಕಣ್ಣಹುದು—
ಉಸಿರಿನೊಡನದರ ಹುಟ್ಟು!

ಯುಗ ಮುಗಿದರೂ ಮತ್ತೆ ಬದುಕಿ ಆಳುವ ಎನಿಸಿ
ಆತ್ಮ ತಾನಮರವಾಯ್ತು;
ಸೊಗ ಬೇಕು ಎಂದೆನಿಸಿ ನಿನ್ನಿಂದ ಅಮರಾತ್ಮ
ಆನಂದರೂಪವಾಯ್ತು!

ನಿನ್ನಲ್ಲಿ ಪರಮಾತ್ಮ ಬಿತ್ತಿ ತನ್ನನು ಜಗವ-
ನೊಂದು ದಿನ ಪಡೆದನಂತೆ!
ನಿನ್ನಲ್ಲಿ ಲೀನನಾದೊಂದು ದಿನ ಜಗವೆ ಬ್ರ-
ಹ್ಮಾನಂದಲೀನವಂತೆ!

ಬಾರ ಬಾ ನನ್ನಾಸೆ, ಚೆನ್ನಾಸೆ, ಹೊನ್ನಾಸೆ-
ತೋರಾಸೆ, ಮೊಗವ ತೋರ !
ರಸವಾಗಿ ರುಚಿಯಾಗಿ ಮೃದುವಾಗಿ ಮಧುವಾಗಿ
ಹೊಸತಾಗಿ ಮಾಗಿ ಬಾರ !

ಹಾಡಾಗಿ ಹರಿದು ಬಾ, ಹರಣದಲಿ ತುಂಬಿ ಬಾ
ಮೂಡಿ ಮುನ್ನಡೆದು ಬಾರ !
ಸರಸಿ ಬಾ, ಅರಸಿ ಬಾ, ಕರೆಸಿ ಬಾ ಕಲ್ಪನೆಯ,
ಅಪ್ಪಿಗೆಯನೊಪ್ಪಿ ಸೇರ !

## ಉಷಾಸೂಕ್ತ

ಮೂಡಲದ ಗಿರಿಯಿಂದ ಮೂಡಿ ಬಂದೆ-ದೇವಿ
ನಾಡಗಲ ನಿನ್ನ ಸಿರಿ ನೋಡಿ ನಿಂದೆ || ಪ ||

ಮೂಡಲದ ಮಲ್ಲಿಗೆಯ ಮುಡಿದಿರುವ ನಲ್ವೆಳಗೆ,
ಪಡುಮುಗಿಲುಗನ್ನಡಿಯ ನೋಡುವವಳೇ !
ತಾರೆಗಳ ಹಾರವನು ಕಳಚಿರುವೆಯಾ-ಮಂಜು
ನೀರಿಂದ ಮೊಗದೊಳೆದು ನಿಂದಿರುವೆಯಾ ?
ಅರುಣಕುಂಕುಮವನ್ನು ಧರಿಸಿರುವೆಯಾ-ಹಗಲು-
ಗೊರಳಿಂದ ಬೆಳಕನ್ನು ಹಾಡುತಿಹೆಯಾ ?

ಏರುತಿರೆ ನೀ ಬಾನ ಗದ್ದುಗೆಯನುಷೆ, ಭೃಂಗ-
ವಾರ ಸಂಗೀತವಂಗೀಕರಿಸಿದೆ !
ಕೀರಜೀವಿಗಳು ಸುಪ್ಪಿಯ ಕೊಡುತಿವೆ—ನಿಂತ
ನೀರಜೀವಿಗಳರಳನೇರಿಸುತಿವೆ !
ಆರತಿಗೆ ಬೆಳಕನ್ನು ಹುಡುಕಿ ಹುಡುಕಿ—ಮಹಾ-
ರಾಯತೀ ಸೋತೆ, ನಗಬೇಡ ಕುಲುಕಿ !

ಹುಟ್ಟು ಕಲೆಗಾರ್ತಿ ನೀ ಹಿಡಿದ ಕಿರಣದ ಕುಂಚ-
ವಿಟ್ಟ ಬಣ್ಣಕೆ ಸಾಟಿಯೆಂಬುದುಂಟೇ ?

ಮುಟ್ಟಿಮುಟ್ಟಿಮುದೆಲ್ಲ ರನ್ನವಾಯ್ತು—ಹೂವು
ಚಿಟ್ಟೆಗಳಿಗೆಲ್ಲ ಮೈದುಂಬಿ ಹೋಯ್ತು !
ಕಟ್ಟೆಯೊಡೆದಿತು ಹರ್ಷಜಲಧಿಯುಕ್ಕಿ—ಹರಣ
ಸೊಕ್ಕಿಹೋಯಿತು ಹೊನಲಿನಲ್ಲಿ ಸಿಕ್ಕಿ !

ತಂಗಾಳಿ ತೆನೆಯೆ, ತಂಪಿನ ತವರೆ, ತನ್ವಂಗಿ,
ತಾರುಣ್ಯದೀಧಿತಿಯೆ, ತುಂಗಸ್ತನಿ !
ಷಟ್ಪದ ಚತುಷ್ಪದ ದ್ವಿಪದಗಳನು—ನೀನು
ಎಚ್ಚರಿಸಿ ಬೆಳಕನೂಡಿಸುವುದೇನು !
ಷಟ್ಕರಣಗಳು ಮಿಂಚುವಾಲಿನಲ್ಲಿ—ಮಿಂದು
ನಿಷ್ಪಾಪವಾಗುತಿವೆ ಬೆಳಕುಬಳ್ಳಿ!

ಯಜ್ಞವೇದಿಕೆಯಗ್ನಿಶಿಖೆಯಂತೆ, ಯಾಜಕನು
ನೆಟ್ಟ ಯಜ್ಞಸ್ತಂಭದಂತೆ ನಿಂತೆ !
ಸಜ್ಜನಿಕೆಯೆಂಬ ಸುಧೆ ಹೆಚ್ಚಿದಂತೆ—ಪ್ರಣ್ಯ
ಪಜ್ಜಳಿಸಿ ಕುಡಿಗೊಂಡು ಬಿಚ್ಚಿದಂತೆ !
ಗೆಜ್ಜೆಗಾಲೆತ್ತಿರುವ ಗೌರಿಯಂತೆ—ಮನದ
ಕಜ್ಜಲವು ತೊಳೆತೊಳೆದು ಜಾರುವಂತೆ !

ಪಾವನತ್ವದ ಪುಷ್ಪ, ದೇವಶಿಲ್ಪಪ್ರತಿಭೆ,
ಜೀವನದ ಸಂಜೀವನೈಕಸಿದ್ಧಿ !
ಸಾವಿರಕೆ ಹುಡುಕಿದರೆ ಸಿಕ್ಕಳೆಂದೂ—ಇಂಥ
ಸಾವಿರದ ರಸಿಕಹೃದಯಾಪ್ತಬಂಧು !
ಧಾವಿಸುವುದೆದೆ ನಿನ್ನ ಬಳಿಗೆ ಚೆಲುವೇ–ಪ್ರೇಮ-
ಭಾವ ನಿನ್ನಲ್ಲೆಷ್ಟದೆಷ್ಟು ಮಿದುವೇ!

ಹೂವನರಳಿಸುವವಳೆ, ಹಸಿರ ಹೊಳೆಯಿಸುವವಳೆ,
ಬರಿದೆ ರಿಸಿ ಕರೆದನೆ "ಅಜುರ್ಯೆ" ಎಂದು ?
ಅಂಗಿರನವಗ್ವರಿಗೆ ಸಿರಿಯನಿತ್ತು—ವಿಶ್ವ
ಮಂಗಲೆ "ಮಘೋನಿ" ನೀನಾದೆಯಂದು !
ಶೃಂಗಾರಗೆರೆ ಸೀರೆಯುಟ್ಟ ಸೂರ್ಯೆ—ಹೃದಯ-
ದಂಗಣವ ನಿರ್ಮಲಿಸು ದೇವಧುರ್ಯೆ !

ನಿಶಿಮಾಯೆ; ನಿಸದ ನೀ ನಿತ್ಯನೂತನೆ, ದಿವ್ಯೆ,
ನೀರಂಧ್ರಬಂಧುರಶರೀರೆ, ಮಧುರೇ!
ಕಾಣಿಸುವ ನಿಶೆ ನಿಶೆಯೆ ಅಲ್ಲವಲ್ಲೇ–ಮತ್ತೆ
ಕಾಣಿಸದ ನಿಶೆಯೆಂಬುದಿಲ್ಲವಲ್ಲೇ!
ಕಾಣುವಿಂದ್ರಿಯಕರ್ಥ ಕೊಟ್ಟೆಯಲ್ಲೇ—ನಿನ್ನ
ಕಾಣದವ ಕಣ್ಣಿದ್ದು ಕುರುಡನಲ್ಲೇ!

ಓ ಬೆಳಕಿನರಗಿಣಿಯೆ, ಮೂಲೋಕ ಕಣ್ಮಣಿಯೆ,
ಚೆಲುವಿನುತ್ಸವೆ, ನನ್ನಿಯುನ್ಮಾದವೇ!
ಬೆಳಕನೊಳಗಿಟ್ಟುಕೊಂಡರಸುವರಲಾ—ತಾಯಿ
ಎತ್ತಿಕೊಂಡೇ ಮಗುವ ಹುಡುಕುವಳಲಾ!
ಬೆಳಕಿಲ್ಲದೆಡೆಯಿಲ್ಲ ಕಾಲವಿಲ್ಲ—ಬೆಳಕು
ಬೆಳಕು ಒಳಹೊರಗೆಲ್ಲ---ನೋಡಿರೆಲ್ಲ!

## ಏನ ಕೊಡಲಿ ಎಂದೆನದಿರು ಗೆಳತೀ!

ಏನ ಕೊಡಲಿ ಎಂದೆನದಿರು ಗೆಳತೀ
ಏನನು ಕೊಟ್ಟರು ಎಲ್ಲವದು ॥ ಪಲ್ಲ ॥

ಕಮಲನಯನಗೆ ಕುಚೇಲನು ಕೊಟ್ಟುದು
ಕಮಲೆಯನೇ ಕರೆತಂದುದಲಾ!
ಅಮಲ ಮನವು ಅಮರತ್ವವ ಪಡೆವುದು;
ಶ್ರಮದ ಕೊಡುಗೆಯಿಂದೇನು ಫಲ?
ಅರ್ಥದ ಭಾವದೆ ಪ್ರೀತಿಯು ಆಳವ
ಅಳೆವುದು ಲೋಕದ ಪದ್ಧತಿಯು;
ಅರ್ಥದಭಾವದೆ ಪ್ರೀತಿಗೆ ಆಳವೆ
ಇರದೆನ್ನದು ಕಬ್ಬಿಗನೆದೆಯು!

ಒಡವೆಯ ಕೊಡುವುದು ಕೊಳುವುದು ನೇಹದ
ಮೊದಲಂತಸ್ತಿನ ಪರಿಪಾಠ;

ಒಡವೆಯ ಮಾರ್ದೊಳುಸುಡಿಕೊಡುಕೊಳು ಮ-
ತ್ತೆರಡನೆಯೇರಿಕೆ, ಮುಂದೋಟ !
ನುಡಿಯನು ಭಂಗಿಸಿ ಆತ್ಮವ ಹೊಗುವುದು
ಕಡೆಘಟ್ಟವು; ಆ ಮೈತ್ರಿಯಲಿ
ನಡೆನುಡಿಯಲ್ಲಿಯುದೆಯಲ್ಲಿಯು ಸಿಕ್ಕದು
ಒಡಕು ಬಿರುಕು— ಆ ಬೆಸುಗೆಯಲಿ !

ಏನನು ಕೊಟ್ಟರು ನೇಹದ ಬಟ್ಟಲೊ-
ಳಮೃತವೆ, ಅದು ಮಧು ಮಾಕ್ಷಿಕವೇ;
ಏನಾಡಿದರದು ಕೊಂಡಾಟವೆ ಸರಿ,
ಇಲ್ಲವೆ ಅದರಲಿ ಪಾಕ್ಷಿಕವೇ !
ಸಕ್ಕರೆಘಟ್ಟಿಯೊಳೆಲ್ಲರಸಿದರೂ
ಸಿಕ್ಕುವುದೇ ಬೇಡದ ಭಾಗ ?
ಅಕ್ಕರೆಯಲಿ ಸಾಯುಜ್ಯದ ಸುಖವಿದೆ;
ಅದು ಎಲ್ಲಾ ಯೋಗದ ಯೋಗ !

## ಜಂಗಮ

ಜಂಗಮಾ ಚಿದ್ವಿಹಂಗಮಾ
ಹೃದಯ ಗಮಗಮಾ ಪ್ರೀತಿಕುಸುಮ,
ನವೊ ನವಾ ಪ್ರಾಣ ಸಂಗಮಾ
ಮೋದ ಸಂಭ್ರಮಾ ರಸದ ಉಗಮ !

ಅವ್ಯಕ್ತ ಶಿವನ, ಅನಿರುದ್ಧ ಭವನ
ಸುವ್ಯಕ್ತವಾದ ಕವನ—
ಆ ಮುಕ್ತಜೀವ ಈ ಸಕ್ತದೇಹ-
ದೊಳಹೊಗಲು ಬಂತು ಜನನ !

ಬೆಳ್ ಬೆಳಕಿನಲ್ಲಿ ಏಳ್ ಬಣ್ಣ ಚೆಲ್ಲಿ
ಬಂದಂತೆ ಚಿತ್ರಭಾನು

ಆನಂದದಲ್ಲಿ ಸುಖದುಃಖ ಚೆಲ್ಲಿ
ಅವತರಿಸಿ ಬಂದೆ ನೀನು !

ಹೆಸರಿತ್ತದಾಗಿ ರೂಪಕ್ಕೆ ತಾಗಿ
ಒಂದಾದ ನೀನು ಮೊದಲು;
ನೂರಾಗಿ ದೃಷ್ಟಿ ಮೂರಾಗಿ ಸೃಷ್ಟಿ
ಹಲವಾಗಿ ತೋರ್ದೆ ಬದಲು !

ವಿಜ್ಞಾನದಲ್ಲಿ ಅಜ್ಞಾನ ಹೆತ್ತು
ಅಡಗಿಸುವ ಲೀಲೆಯೇನು—
ಆನಂದ ಬಿಟ್ಟು ಅಲ್ಲಲ್ಲಿ ತಿರುಗಿ
ಮತ್ತಲ್ಲೆ ಲೀನ ನೀನು!

ನಿನ್ನೊಳಗಣಿಂದ ನನ್ನಿತ್ತ ತಂದು
ಕುಣಿಸುತ್ತಲಿರ್ಪೆ ದೇವ,
ನನ್ನೊಳಗೆ ನೀನು ಕುಳಿತಿಂತು ಹರಿಯಿಸುವೆ
ನಿನ್ನ ದಿವ್ಯ ಕಾವ !

ಕಣ್ಕಿವಿಗಳಿಂದ ಬಹಿರಂಗದಲ್ಲಿ
ಆಸ್ವಾದ್ಯನಾದ ಪುರುಷ,
ಬರಿಬೆಳಕು ಕಣ್ಣ ಚುಚ್ಚೀತು ಎಂದು
ಕರೆದಿರ್ಪೆ ತಮದ ವರುಷ !

ಅಲ್ಲಲ್ಲಿ ಸೋಸಿ ಒಂದೊಂದೆ ಮೂಸಿ
ಮನದಣಿದೆ, ನಿನ್ನ ಸೃಷ್ಟಿ—
ಹುಲ್ಲಾಗಿ ಹುಟ್ಟಿ ಹೂವಾಗಿ ಬೆಳೆದು
ಕೊಟ್ಟಿತ್ತು ನಿನ್ನ ದೃಷ್ಟಿ !

ಜಂಗಮೂ ದಿವ್ಯಹೃದ್ಗಮೂ
ಕಾವ್ಯವಿಭ್ರಮೂ ಕಾಲ ಹಿಡಿವೆ,
ನಮೊ ನಮೂ ವಿಶ್ವತೋಭ್ರಮೂ
ಕರ್ಮಸಂಕ್ರಮೂ ಘೂಳ ಮುಡಿವೆ !

## ಎದುರಿಸದಿರೆ ನಾಶ ಸತ್ಯ!

ಕಾಲಕಾಲನಾಗಿ ನಂಜ ನುಂಗು ಜೀವ!—ಭಯದ
ಮೂಲವನ್ನೆ ಮುರಿಯೆ ಬರ್ಕು ಧೀರಭಾವ!

ನೂರು ದೇವರುಗಳಿಗೆರಗಿ ನೂರು ದಾರಿ ತುಳಿಯಲೇಕೆ?
ನೂರು ಗುರಿಗಳೆಂದರಲ್ಲ ಗುರಿಗಳವು; ಬಿಸಾಡು ಹೊಲ್ಲ!
ಅರಸಿ ಅದನು ಇದನು ದುಃಖ-
ಸರಸಿಯಲ್ಲಿ ಬೀಳಲೇಕೆ?
ತರಿಸಿಕೊಳುವ ಶಕ್ತಿ ಬೇಕು;
ಬರಿದೆ ಬೇಡಲೆಲ್ಲ ಹೋಕು!

ಎಲೆಲೆ ಜೀವ, ನಿಂತ ಕಡೆಯೆ ನಿಲಲು ಕೂಡ ಸೀ ವಿರುದ್ಧ—
ಬಲದ ಹತಿಯನಾಂತು ತಡೆಯೆ ಬಲವ ಪಡೆಯದಿರಲು ಬದ್ಧ!
ಸೂರ್ಯ-ಚಂದ್ರರಿಂದ ಹಿಡಿದು
ಜೀವ, ಜಡ, ಸಮಸ್ತ ನಿತ್ಯ
ಧಾವಿಸುತಿದೆ ನಿನ್ನ ಮೇಲೆ—
ಎದುರಿಸದಿರೆ ನಾಶ ಸತ್ಯ!

ತಾಯಿ-ತಂದೆ ಮೊದಲುಗೊಂಡು ಅನ್ನ-ಚಿನ್ನ-ದೈವವೆಲ್ಲ
ಕಾಯಕಷ್ಟದಿಂದ ಪಡೆವ ಪ್ರಗತಿಗಾಗಿ—ಪ್ರಗತಿಯಲ್ಲ!
ಜಗವ ತಿದ್ದಲೆಂದು ಹೊರಟು
ಗೆದ್ದ ವೀರನೊಬ್ಬನಿಲ್ಲ;
ದೃಷ್ಟಿಯಂತೆ ಸೃಷ್ಟಿಯಿಹುದು;
ಸೃಷ್ಟಿಯೊಂದೆ, ದೃಷ್ಟಿಯಲ್ಲ!

ದೊಡ್ಡ ತಾರೆಯೆರಡರೆಳೆತಕಷ್ಟು ಸಿಕ್ಕಿ ನರಳ್ವ ಗ್ರಹಕೆ
ಸದೃಶವೀ ಸಮಾಜ ಮಂದ-ಶೀಘ್ರವಾದವಲ್ಲಿ ಸಿಲುಕೆ—
ಎಲ್ಲ ಜನದ ಹರುಷ ತನ್ನ-
ದೆಂಬ ಭಾವ ಮೂಡಲಿಲ್ಲ:
ಎಲ್ಲದಲ್ಲಿ ತನ್ನ ತಳವ
ಗುರುತು ಮಾಡಿಕೊಳ್ಳಲಿಲ್ಲ!

ಅದರಿನಿಂದ್ರ ಚಂದ್ರ ನಾನು, ವಿಗಡಬಲ ಕೃಶಾನು ಭಾನು-
ಎಂದು ತನ್ನ ತಾನೆ ನುತಿಸಿ ಕುರುಡನಾದ ಮರ್ತ್ಯಸೂನು !
ಮುಳುಗಿದಿನನು ಮೂಡದಿರನು--
ಕತ್ತಲೆಷ್ಟು ತಡೆದರೇನು ?
ಬೆಳೆವುದೆಮಗೆ ಜನ್ಮಸಿದ್ಧ—
ಬಿದ್ದ ಮನುಜನೇಳದಿರನು !

‘ ಸ್ವಸ್ತಿಪಂಥದಲ್ಲಿ ಸೂರ್ಯ-ಚಂದ್ರರಂತೆ ನಡೆವೆ ’ ವೆಂದ
ಸ್ತುತ್ಯ ಪೂರ್ವಜರನು ನೋಡು, ಅತ್ತುಕರೆಯಲೇನು ಚೆಂದ ?
ಹರುಷರೂಪ ! ಸತ್ಸ್ವಭಾವ-
ಕೆರಗಿ ಯೋಧನಂತೆ ತಾವು-
ಪರನು ತಡೆಯಲಾತ್ಮಬಲವ
ಪಡೆವ ಬಯಕೆ ದಿವ್ಯಕಾಮ !

ಅದನು ತಳೆದದಮ್ಯ ಯತ್ನವೆಸಗು ಧೀರಜೀವ, ಮನದ
ಪಿಶುನಭಾವದೆದೆಯ ಮೆಟ್ಟಿ ಅಡಿಯಿಡು ಪ್ರತಾಪ ಬೆರೆದ !
ಇರಿದು ಕೆಡಹು ತಡೆಗಳನ್ನು,
ನಿಜಪ ಮೊಳಗು ಒಳಗು ಹೊರಗು;
ಅಹ ನವೋನವಪ್ರಭಾವಿ
ಆತ್ಮತೇಜವದನು ಬೆಳಗು !

ಕಾಲಕಾಲನಾಗಿ ನಂಜ ನುಂಗು ಜೀವ !— ಭಯದ-
ಮೂಲವನ್ನೆ ಮುರಿಯೆ ಬರ್ಕುದ ಧೀರಭಾವ !

## ದೀನೆ

ಎನಗಿದು ತಿಳಿಯದು ಎನಗಿಸು ಹೊಳೆಯದು,
ಎನಗಿದರರಿವಿನಿತೂ ಇಲ್ಲ !
ಅನುಮಾನಿಸಿ ಅನುಮಾನಿಸಿ ಮಾನಿಗ-
ಳನುನಯಗೈದೆನು ಬಹುಬಲ್ಲ

ಬೆಳಗಿನ ಮಲಮಲ ಮಲರುವ ಮಲ್ಲಿಗೆ-
        ಯೊಳಗೂ ವಿಷವಿರಬಹುದೆಂದೆ?
ಸೆಳವಿಲ್ಲದ ತಿಳಿಪೊನಲೂ ತಪ್ಪನು
        ಸೆಳದೀತಂತರ್ಹೃದಕೆಂದೆ?

ಅರಿಯದ ಮುಗುದೆಯ ಬೆರಗಿನ ನೋಟದಿ
        ಇನಿಸಾದರು ನಂಜಿದ್ದೀತೆ?
ಹರೆಯದ ಹೂನಗೆಯರಳಿದ ಮಾತ್ರಕೆ
        ಹೆರವರ ಎದೆಗದು ಗುದ್ದೀತೆ?

ನನ್ನೆದೆಮಾತಿಗೆ ತಮ್ಮೆದೆಮಾತನು
        ಕೊಡದೇತಕೆ ಜನ ತಡೆಯುವರು?
ಎನ್ನೊಲವಿಗೆ ಒಲವೀಯುವೆ ಚಣಚಣ-
        ದಲ್ಲೇತಕೆ ಮೊಗದಿರುಹುವರು?

ಎಳೆದಳಿರಿನ ಎಳಗೆಂಪಿನ ಮಾಮರ-
        ದೆಳಮೊಗೆ ಮಚ್ಚರ ಹುಟ್ಟೀತೆ?
ಕಳವೆಯ ತೆನೆಗಳ ಮೇಲುಲಿದಾಡುವ
        ಎಳಗಿಳಿ ಪಾಪವ ಮುಟ್ಟೀತೆ?

ಹಾಲಲಿ ಹುಳಿಯಿದೆಯೆನ್ನುವ ಲೋಕದ
        ಕಾಲಿನ ತುಳಿತಕೆ ಪುಡಿಯಾದೆ,
ಕಾಲಕೆ ನಮ, ಕಂಕಾಲಕೆ ಸಮವೀ
        ಬಾಲೆಯ ತನು—ಬರಿ ಹಿಡಿಯಾದೆ.

ಬಾಲಕ ಬಾಯಲಿ ಬೆರಳನುಂಡು ಮೊಲೆ-
        ವಾಲ ಕುಡಿದೆನೆನ್ನುವ ತೆರದಿ,
ತಾಳ ಹಾಕಿ ನನ್ನಷ್ಟಕೆ ಕುಣಿದವ
        ಮೆಚ್ಚುವರೆಂದುಬ್ಬಿದೆ ಭರದಿ!

ಕುಂಕುಮವಿಡೆ ಕುಂದೆಂಬರು, ಬರಿಹಣೆ
        ಕಂಡರೆ ಕಿಡಿಯುಗುಳ್ವರು ಬಿಡದೆ;
ಲಂಕೆಯ ತುಳಿದಾ ಪಾಪಕೆ ಸೀತೆಯ
        ಬೆಂಕೆಯು ತಾ ಬಿಟ್ಟಿತು ಸುಡದೆ!

ಒಲವೋ ಒಲವೆಂದುಲಿದುಲಿದರಗಿಳಿ
ಬಲಗುಂದಿತು ಪಂಜರದಲ್ಲಿ,
ಚೆಲುವೋ ಚೆಲುವೆಂದೀ ಜಗವಳಲನೆ
ನಲವೆಂದಿತು ಸುಖಮುದದಲ್ಲಿ!

ನಾಥರ ಕಾಣದನಾಥೆಯು ಒಡಲಿನ
ಪ್ರೀತಿಯ ಹಸಿವಿಂಗಿಪರಾರು?
ಪೂತಾತ್ಮರ ಸುಖಕೀ ರಟ್ಟೆಗಳನು
ಸವೆದ ದಿನವ ಲೆಕ್ಕಿಪರಾರು?

ಹಾ ಹೃದಯವೆ ಹಾ! ಹಸುಳೆಯೆ ಹಾಹಾ!
ಅಕರುಣವಾದ ಸಮಾಜದಲಿ,
ಹಾ ಹೆಂದಿದೆ, ಹಾ ಕುಂದಿದೆ, ಕಂದಿದೆ,
ನೊಂದೆ ಬೆಂದೆ ನಿಂದಾಗ್ನಿಯಲಿ!

ಕುಂದದ ಕಂದಳಿಯುಂದದ ಮೃದುಮಧು-
ಬಂಧದ ಕರುಣಾಕ್ರಂದನವ,
ಒಂದಿನಿತೂ ಲೆಕ್ಕಿಸದಿಹರೇತಕೆ
ಬಂಧುಗಳೂ? ತಿಳಿಯೆನು ನಿಜವ!

ಕರುಣವೆ ರಸವೆಂದೋ ಕರುಣಾರ್ಣವ-
ಕವಿ ನಿನ್ನುಲಿ ಇಂದಿಗೆ ಸುಳ್ಳು!
ಶರಣೆಂದರು ಎದೆಗರಗದ ಜನವಿರೆ
ಮರಣವೆ ಶರಣಲ್ಲವೆ ಹೇಳು?

## ಹೃದಯದ ಹಕ್ಕಿಯು ಹಾಡುವುದು!

ಹೃದಯದ ಹಕ್ಕಿಯು ಹಾಡುವುದೊಡಲಲಿ
ಹುದುಗಿದ ಭಾವದ ಗೀತೆಗಳ;
ಹೃದಯದೊಳಡಗಿದ ರಾಗದ್ವೇಷವ
ಕೆದರಿ ನೋಡುವುದು ಜೀವಿಗಳ!

ಮನಸಿಗೆ ಮುಸುಕಿದ ಮಾಯೆಯ ತೂಂತಿನೊ-
ಳಿಣುಕಿ ನೋಡುವುದು, ಜೀವನದ
ಘನತೆಯನರಿದೀ ಜನತೆಗೆ ಸಾರ್ವುದು
ವಿನಿಯೋಗವ ತನುಮನಧನದ !

ಮುಕುರದಿ ಮುಖವನು ಕಾಣುವ ತೆರದಲಿ
ಮುಖದಲಿ ಹೃದಯುವ ಕಾಣುವುದು ;
ಬಕುತರಿಗೊಲಿವುದು, ಬಲುಹಿನ ಗಂಡರ
ಶಕುತಿಯು ದೂರದಿನಳೆಯುವುದು !

ಭಾವದ ಬಹುವಿಧ ರಾಗಕೆ ದನಿಗೊ-
ಟ್ಟೆಳೆವುದಿದೆಂಬುದ ತಿಳಿದಿಹಿರಾ ?
ಭಾವರಸವನುಕ್ಕಿಸಿ ಜನಹೃದ್ಗತ
ಭಾವವ ಬಯಲಿಗೆ ತರುವುದಲಾ !

ಎಂಟೂ ದಿಕ್ಕಿನ ಯಜಮಾನರಿಗಹ
ಸಂಕಟ ಶುಭಸಂದೇಶಗಳ
ಬಂಟನವೊಲು ಬಹಿರಂಗವ ಮಾಳ್ಪುದು-
ಎಂಟಿದೆಯೇ ಇದಕೆಂಥ ಚಲ !

ಎಲ್ಲರ ಮನದಲಿ ವಿಹರಿಪ ಭಾವವ-
ನೆಲ್ಲವ ಸೆರೆಹಿಡಿದೆರೆಯನಿಗೆ
"ಎಲ್ಲವು ನಿನ್ನದೆ" ಎಂದೀ ಜೀವನ-
ದೆಲ್ಲೆಯ ತೋರ್ಪುದು ಜನಗಳಿಗೆ !

## ಏಕನಾದವೆ ಬರಲಿ !

ಅಷ್ಟದಿಕ್ಕುಗಳಿಂದೆ ತಂದಿರುವ ಮೊಯ್ಗೊಂಡ
ಬುರುಡೆಯೊಳನಿಟ್ಟಿಂದ, ತಂತಿಯಿಂದ
ನೆಟ್ಟಕೋಲ್ ಕಟ್ಟುಸಮ್ಮಂಗಳಂಗಾಂಗದಿಂ-
ದೇಕನಾದವೆ ಬರಲಿ ಏಕನಾದ !

ಗಿರಿಗಿರಿಗಳನು ಸುತ್ತಿ, ವನವನಗಳನು ಬಳಸಿ,
ನದಿ-ನದಿಗಳೆಡೆನಿಂದು, ದಾರಿಯಲ್ಲಿ
ತರತರದ ಹಳ್ಳಿಗಳನಲೆದ ಕಿಂದರಿಯಿಂದ
ಏಕನಾದವೆ ಬರಲಿ ಏಕನಾದ!

'ಕರುನಾಡಿನಲಿ ಮಣ್ಣು ಕರಿದು ಕೆಲವೆಡೆ, ಮನವು
ಕರಿದಲ್ಲ, ಸಿರಿ-ಬಾಣಿಯರಿಗೆ ತವರು
ಕರುನಾಡು' ಎಂದು ಗೋಸಣೆಗರೆವ ಕಸುವುಳ್ಳ
ಏಕನಾದವೆ ಬಳಲಿ ಏಕನಾದ!

ಭಾಷೆಯಿಂದೊದಗಿಸಿದ, ಭಾಷಣದೊಳೇರಿದಾ-
ವೇಶದಿಂದುಸುರಿದೇಕತೆಯ ನುಡಿಯ
ತಾಸುತಾಸಿಂಗೊಂದು ಮನೆಗೆ ಸಾರುವ ಜೋಗಿ-
ಯೇಕನಾದವೆ ಬರಲಿ ಏಕನಾದ!

ವೀರರಿಗೆ ವೀರರಹ 'ನಾಡವರ' ನಾಡಿದೆಂ-
ಬೈತಿಹಾಸಿಕ ತತ್ವವೆರೆದು ನಮ್ಮ
ವೀರ ತರುಣರ ಕೆಚ್ಚ ಕೆರಳಿಸುವ ಪಣತೊಟ್ಟ
ಏಕನಾದವೆ ಬರಲಿ ಏಕನಾದ!

ಕನ್ನಡದ ತಾಯಂದಿರೊಲಿದಿತ್ತ ದವಸಕ್ಕೆ
'ಹೊನ್ನಾಗಲವ್ವ ನಿನ್ನಿಂದ ಬಂದ
ಚೆನ್ನಿಗನು ನಾಡ ಬಂಟರೊಳೆ'ಂದು ಹರಸುವಾ
ಏಕನಾದವೆ ಬರಲಿ ಏಕನಾದ!

ಗಾಯನದಲಿ ಬರೆವಣಿಗೆಯಂತೆಪ್ರೊಲು ಹಾಸ್ಯದಲಿ
ಹೋಳಾಗಿ ಬಾಳುತಿಹ ಕನ್ನಡಿಗರ
ಏಕರೆಂದವರ ಕಿವಿಗಿಂಪಂತೆ ದನಿಗೊಡುವ
ಏಕನಾದವೆ ಬರಲಿ ಏಕನಾದ!

ನಡೆ-ನುಡಿಗಳಲಿ ಓದು-ಬರೆಹದಲಿ ಮೇಣ್ ನಮ್ಮ
'ಕೊಡು-ತರು' ಗಳಲಿ ಚಿತ್ತವೃತ್ತಿಗಳನು
ಹಿಡಿದೊಂದುಗೂಡಿಸುವ ದೇವಮಾಯೆಯು ಬಲ್ಲ
ಏಕನಾದವೆ ಬರಲಿ ಏಕನಾದ!

# ಮಂದಹಾಸ

ಮಂದಹಾಸದ ಜೊನ್ನ ಮನವನಾವರಿಸಿಹುದು
ಕಂದನಾ ಚಂದಿರನ ಪ್ರೋಲ್ಲಮೊಗದ !
ಒಂದು ನಿಮಿಷದಿ ಹರುಷಸಿಂಧುವಿನೊಳವಗಾಹ
ಹೊಂದುವುದೆ ತಲೆಬೆಲೆಯು ನರರ ಸೊಗದ !

ಕಾರಣವು ಸಿಗದು ಕಿರುಬಾಲನಾ ಸ್ಮಿತಕೆ, ಸೊಗ-
ಸೇ ರಮಿಸುತಿಹುದು ತನ್ನೊಳಗೆ ತಾನೇ ;
ಭೂರಮಣಿ ಪಡೆದ ಪ್ರೇಮದ ಮುಗುಳಿದಲ್ತೆ, ಸೊಗ-
ದೇರುವಿಕೆಗಾಯ್ತುದೇ ಚರಮಸೀಮೆ !

ಅಂದದುದಧಿಯ ಅಮೃತಬಿಂದುವೊಗೆತಂಮುದೆನೆ
ಬಂದು ಹರಹುತ್ತಿಹುದು ನಗುವು ಸುತ್ತ ;
ಒಂದನರಿಯದ ಹಸುಳೆಯಂದು ಪೇಳುವೆವು ಆ-
ನಂದಲಹರಿಯನರಿಯಲಾರದತ್ತ !

ರಾಗರಸವ್ರೊಸರುತಿರೆ ಮುಗುಳ್ನಗೆಯೊಳಲ್ಲಿ ಮು-
ದ್ದಾಗಿ ತೋರುವದು ದೈವೀವಿಳಾಸ ;
ಆಗು ಹೋಗುಗಳ ಚಿಂತೆಗೆ ಸಿಲುಕದಿರುವುದಾ
ಯೋಗನಿರ್ಮಳಚಿತ್ತದೊಂದು ಹಾಸ !

ಭಾಸ್ಕರನ ಕಂಡು ಕಮಲಿನಿಯು ವಿಕಸಿಸುವಂತೆ
ಈ ಸಕಲ ಜಗವ ಕಂಡೊಂದುಬಗೆಯ
ದೋಷವಿಲ್ಲದ ಮಂದಹಾಸವರಳುತಿಪ; ತಿಳಿ
ಹಾಸೆಯನು ಆ ತುಂಬುಮೊಗದ ನಗೆಯ !

ಉಸಿರುವುದು ಮೆಲುನಗೆಯು ಕವಿಸ್ವಹೃದಯವನು ಕುರಿತು
" ಹುಸಿಯಲ್ತೆ ಈ ಸಿರಿಯ ನಟನೆಯೆಲ್ಲ !
[illegible] ಜನರ ಕಣ್ಣನೆಗೆ ನು-
[illegible] ನಗೆಯು [illegible] ! "

# ಪ್ರೇಮಿಯ ದೂರು

ಹೊಳೆವ ತಾರೆಗೆ, ನಿನ್ನ ನಿಶ್ಚಲತೆಯಿರಲೆನಗೆ —
ಏಕಾಕಿಯಾಗಿ ನಿಶೆಯಾಂತು ಜೋಲ್ತಿರಲಾರೆ,
ಹರಿವ ನೀರರ್ಚಕನ ತೆರದೆ ಮಾನವಕುಲದ
ತಟಕೆ ಸಮ್ಮಾರ್ಜನವ ಮಾಡಿಸುತ್ತಿರುವುದನು
ಪ್ರಕೃತಿದೇವಿಯ ಬಳಿಯ ರೋಗಿಯಹ ಜೋಗಿವೊಲು
ನಿದ್ದೆಯಿಲ್ಲದೆ ನಿತ್ಯ ಹೆಪ್ಪಳಿಸುತಿರಲಾರೆ,
ಅಲ್ಲದೊಡೆ ಗಿರಿವನಪ್ರಸ್ಥಂಗಳನು ಕವಿದ
ನುಣ್ಣನೆಯ ನವ ಹಿಮಚ್ಛದವ ದಿಟ್ಟಿಸುತಿರೆನು ;

ಇಲ್ಲ—ನಿಶ್ಚಲತೆಯಲಿ ನಿನ್ನನೂ ಮೀರಿಸುತ
ಎನ್ನ **ಚೆನ್ನೊಲವಿಗಿಹ** ಮಾಗಿದೆದೆದಿಂಬಿನಲಿ
ತಲೆಯಿಟ್ಟು, ಮೆಲ್ಲನದರೇರಿಳಿತವನುಭವಿಸಿ
ಮಧುರ ವಿಭ್ರಮದಿಂದ ಕಣ್ದೆರೆದು ನೋಡುತ್ತ
ಅವಳ ಕೋಮಲವಾದ ಉಸಿರಿಂಗೆ ದನಿಗೊಡುತ
ಎಂದೆಂದು ಜೀವಿಸುವೆನಂತೆ ಇಲ್ಲವೆ ಸಾವೆ !

(ಕೀಟ್ಸ್ ಕವಿಯ ಸುನೀತವೊಂದರ **ಭಾವಾನುವಾದ**)

# ಅಭೇದ

ಕಾಡಿನಲಿ ಬೆಳೆದ ಕುಸುಮವು ಚೆಲುವಿನಲಿ ಕೀಳೆ
ನಾಡಿನಲಿ ಬೆಳೆದುದಕೆ ? ಸೌಂದರ್ಯಕೆ—
ಕಾಡುನಾಡೆಂಬುದೇನುಂಟು, ಪರಿಕಿಸೆ ಹಳ್ಳಿ-
ಗಾಡಿನಲೆ ನಿಜನಿಸರ್ಗದ ನರ್ತನ !

ಸಿರಿವಂತನೇನು ಬಡವರಿಗಿಂತ ಗುಣಯುತನೆ ?
ಸಿರಿಯೇನು ದಾರಿದ್ರ್ಯವೇನು ಗುಣಕೆ ?
ಅರಿತವನು ಜಗದ ಪರಿಭೇದಗಳನೆಣಿಸುವನೆ ?
ಹರಿಯೇನು ಹರನೇನು ಜ್ಞಾನಿಗಳಿಗೆ ?

ಬಾಲ ನುಡಿದೊಡೆಯು ವೃದ್ಧನು ನುಡಿದೊಡಂ ಸತ್ಯ,
ಬಾಲವೃದ್ಧರಿಗದೇಂ ಬೇರಪ್ಪುದೆ?
ಹಾಲು ಹಾಲೇ ವಿವಿಧ ಪಾತ್ರೆಯೊಳಗಿರ್ದೊಡಂ,
ಕಾಲದೇಶಗಳುಂಟೆ ಪರತತ್ವಕೆ?

ಉರಿವ ಕಿಚ್ಚಿಗೆ ದೊಡ್ಡ ಚಿಕ್ಕ ಮರಗಳ ಪರಿವೆ?
ಹರಿವ ನೀರಿಗೆ ಹಳ್ಳಹೊಳೆಗಳೇನು?
ಪುರುಷನೇಂ ಸ್ತ್ರೀಯೇನು ಕರ್ಮಪಾಶಕ್ಕೆ? ಜರೆ
ಮರಣಗಳಿಗೇನು ಜೀವಿಗಳ ಭೇದ?

ಆವ ಗಿರಿಶಿಖರದಲಿ ಪುಟ್ಟಿರಲಿ ನದಿನದಗ-
ಳಾವೆಡೆಯೊಳುದಧಿಯಿರ್ದಪುದೊ ಅಲ್ಲಿ--
ತಾವೆ ತಾವಾಗಿ ನೆರೆವಂತೆ, ಬಹು ಮತಗಳೆ-
ಲ್ಲಾ ವಿಶ್ವಶಕ್ತಿಯಿರ್ದೊಡೆಗೊಯ್ವುವು!

ಜ್ಞಾನವಿಜ್ಞಾನಸತ್ಕರ್ಮ ನಿಷ್ಕರ್ಮಗಳು
ಮಾನವಗೆ ತಂದು ತೋರ್ಪವು ಸತ್ಯವ;
ಯಾನ ಬೇರಾದೊಡೇನಲ್ಲಿ ನಾವ್ ಸೇರುವ
ಸ್ಥಾನ ಬೇರಾಗುವುದೆ ಬಗೆದು ನೋಡೆ?

ಜನನೀಜನಕರಿಂಗೆ ಭೇದಭಾವನೆಯುಂಟೆ
ಜನಿಸಿರುವ ಮಕ್ಕಳಲಿ? ಸೃಷ್ಟಿಗೆಲ್ಲ
ಜನನೀಜನಕರಪ್ಪ ಜಗದಾದಿದೇವನಿಗೆ
ಜನವೆಲ್ಲವೊಂದೆ ವ್ಯತ್ಯಾಸವಿಲ್ಲ!

ವಸ್ತುಭೇದವೆ ಕವಿಗೆ? ರಸೆಯೊಳೆಸೆಯುವ ಸರ್ವ
ವಸ್ತುಗಳೊಳೊಂದೊಂದು ಗುಣವ ಕಂಡು,
ಚಿತ್ತದೊಳಗುದಿಸಿರುವ ಭಾವರಸದುತ್ಸವ ಸ-
ಮಸ್ತರಿಂಗಿತ್ತು ಸಂತೋಷಿಸುವನು!

# ಮೂಲೆಮೂಲೆಗಳಿಂದ

ಈರೇಳು ಲೋಕಗಳ ಮೂಲೆಮೂಲೆಗಳಿಂದ
ಕೇಳಬರುತಿರುವುದೀಗ---
ಆರೆಮ್ಮನಾಳುವರು ಆರೆಮಗೆ ಬೆಸಸುವರು ?
ನಾವೆ ನಮ್ಮರಸರಲ್ತೆ !

ಅರಳಿ ಮಗಮಗಿಪ ಮಲ್ಲಿಗೆಗೆ ಮುಡಿವವರಲ್ಲಿ
ಇರುವದೇ ಪಕ್ಷಪಾತ ?
ತರಳತರವಾದ ತಂಬೆಲರೊಬ್ಬನುಳಿದೊಬ್ಬ-
ನರಸಿ ಬೀಸುವದು ಉಂಟೆ ?

ಆ ಗಂಗೆ ಆ ಪುಣ್ಯತೀರ್ಥರೂಪಿಣಿ ದೇವಿ-
ಗಾಗದವರಿಹರೆ ? ಬರಲಿ,
ಯೋಗಿಗಳು ಭೋಗಿಗಳು ಆರಾದರೇಂ ಮುಳುಗಿ
ಮಿಂದು ಸಂತೋಷಪಡಲಿ !

ಜಗದ ಕಂಗಳೆನಿಪ್ಪ ತರಣಿಚಂದ್ರಮರಿಂಗೆ
ಹಿಂದು ಮಹಮದಿಯರೆಂದು
ಬಗೆದು ಬೆಳಕನು ಕೊಡುವ ಶೀಲವುಂಟೇ ? ಎಲ್ಲ
ನಗೆಗೇಡಿತನವಿದಲ್ತೆ !

ಬಿಳಿಯರಿವರಿವರು ಕರಿಯರು, ಹೊನ್ನಬಣ್ಣದವ
ರಿವರು ಎಂದೆಣಿಸಿ ಜನರ
ಕೆಳ-ಮೇಲುತನವನ್ನು ದೇವನಿಳೆಗಿಳಿದು ಬಂ-
ದೊರಲಿದನೆ ಕೇಳಿರೆಂದು ?

ಇವರಾಳ್ಗಳಿವರರಸರಿವರು ತೊತ್ತಿನ ಮಕ್ಕ-
ಳೆಂದು ಪರಿಗಣಿಪರಾರು ?
ಅವರಿವರ ಆಸ್ತಿಗಳ ನುಂಗಿ ನೀರ್ಗುಡಿದು ಕೊ-
ಬ್ಬಿರುವ ಹಣಗಾರನೊಬ್ಬ !

ಕೋಟಿಗಟ್ಟಲೆಯು ಬಡ ಜನರು ಜೀವನದ ಕಿಡು-
ಗೋಟಲೆಗೆ ಸಿಲುಕಿ ನೊಂದು
ಊಟಕಿಲ್ಲದೆ ಹಸಿದು ಬಳಲುತಿರೆ ಸಿರಿವಂತ
ನಾಟಕವ ನೋಡುತಿಹುದೇ ?

ಈ ವಿಶ್ವವನು ಸೃಜಿಸಿ ಪೊರೆವಾತನಿದಿರಿನಲಿ
ಆರು ಕೀಳಾರು ಮೇಲು ?
ನಾವೆಲ್ಲರೊಂದೆ, ನಮ್ಮೊಳಗೇನು ಭೇದ ? ಈ
ಭಾವನೆಯು ಬಿಡಲೆ ಬೇಕು !

## ಅಕ್ಕನ ನೆನಹು

( ಸಾಂಗತ್ಯ )

ಅಕ್ಕ ನಿನ್ನೊಡನಿರ್ದ ದಿನಗಳ ಚರಿತೆಯು-
ನಕ್ಕರದಲಿ ಪೇಳಲಳವೆ ?
ಸಕ್ಕರೆಯಂತಹ ಸವಿಗತೆಗಳನೆನ್ನ
ಚಿಕ್ಕಂದಿನಲಿ ಪೇಳ್ದಿಯಲ್ತೆ !

ಆಳುವ ಬಾಳುವ ಹಿರಿಯಾಸೆಯೆಳೆಯೆದೆ-
ಯಾಳವಾಳದಿ ಹರಿಯಿಸಿದೆ ;
ಬಾಳಿನ ಬಳ್ಳಿಯು ಬೆಳವಣಿಗೆಗೆ ಕತೆ-
ವಾಲನೆರೆದೆಯಕ್ಕರೆಯಲಿ !

ಕುಳಗಿರಿಕೂಟದಿಂದಿಳಿದು ಹರಿವ ನದಿ-
ಗಳು ಬುವಿಯನು ಹದಗೊಳಿಪ
ಅಳವಿಯನಲ್ಲಗಳೆವುವು ನೀನೊರೆದಿರು-
ವೊಳುನುಡಿಗಳು ಬಾಲ್ಯದೊಳಗೆ !

ದೇಶ ದೇಶದ ರಾಜಮಂತ್ರಿಭಟರ ಬಲು
ಸಾಸದ ಹರಿವೊನಲುಗಳು
ಆಸೆಯು ಹೃದಯದೊಳೆಬ್ಬಿಸುತಿರ್ದವು
ಆ ಸಮಯದೊಳೆಡೆವಿಡದೆ !

ರಾಮರ ಗುಣವಂಜನಾತ್ಮಜನೊಲುಮೆ ವಿ-
ರಾಮವಿಲ್ಲದೆ ಮನದೊಳಗೆ
ಭೀಮಾರ್ಜುನರ ಬಲ್ಪನೊಡಗೂಡಿ ಬಂದು ನಿ-
ಸ್ಸೀಮ ಹರ್ಷವನುಣಿಸಿಹವು !

ಅಕ್ಬರದೊರೆ ಬೀರಬಲ್ಲನ ಜುತ್ತಿಗೆ
ಸಿಕ್ಕಿದ ಪರಿಯು, ತೆನ್ನಾಲಿ
ಬೆಕ್ಕು ಪಾಲ್ಗಂಜುವ ತೆರನಾಗಿಸಿದ ಜಾಣ್ಮೆ-
ಯಳ್ಕಜವನು ಪುಟ್ಟಿಸಿಹವು !

ಬೀರರ ಬೀರ ಶಿವಪ್ರಭು ನಾಡಿಗೆ
ಹೋರಾಡಿ ದುಡಿದುದೆನ್ನೊಡಲ
ಏರುವುತ್ಸಾಹದ ಹಗ್ಗಿಯ ಕೆದರಿ ಮೇ-
ಲೇರಿಸಿಹುದು ಮುಗಿಲೆಡೆಗೆ !

ಕನ್ನಾಡ ಸಿರಿವೆಣ್ಣು ಬಂಗಾರದೊಡ್ಯಾಣ-
ವನ್ನು ಧರಿಸಿ ಕಾಲಂದುಗೆಯ
ಝಣ್ಣೆನಿಸುತ ಕುಣಿದಾಡಿದ ಕಾಲವ
ಬಣ್ಣಿಸಿ ಪೇಳ್ದೆ ನೀನೆನಗೆ !

ಕೆಚ್ಚಹೆಚ್ಚಿಸಿಯೆನ್ನ ಮನದೊಳಗಾಗ ಪ-
ಳಚ್ಚನೆ ಹುರುಪು ಮೂಡಿಸುವ
ಮೆಚ್ಚುಗತೆಯ ತಿನಿಸುಣಿಸುಗಳಿತ್ತೆ ನೀ-
ಸಿಚ್ಚಮೆನಗೆ ನಲಿದೊಲಿದು !

ತಿಳಿಯದ ತಿಳಿಯೆದೆಯೊಳಗುಚ್ಚ ಧ್ಯೇಯದ
ಸುಳಿವಾಗಿ, ಬಹುಕಲ್ಪನೆಗಳ
ಬೆಳೆಯು ಬೆಳೆದು ಭಾವಸಾಮ್ರಾಜ್ಯವಾಳುತ
ಕಳೆದೆನೆಳವೆಯ ನಾನಂದು !

ನಿನ್ನ ನಣ್ಪಿನ ನಂದನದೊಳಾಗ ಕೇಳಿಕೆ-
ಯನ್ನೆಸಗಿದ ದಿವಸಗಳು
ಕಣ್ಣಮುಂದೈತಂದು ಕುಣಿವುದು, ತೋಷವ
ದಿಣ್ಣೆಯೊಡೆದು ಹರಿಸುವುದು !

ಅಕ್ಕ 'ವಾಚಕ್ನ,' ಸೋದರಿಯಾಗು ಜನ್ಮ ಜ-
ನ್ಮಕ್ಕು, ಈಗಲ್ಲದೊಡೇನು ?
ಪಕ್ಕರೆಯಿಲ್ಲದ ಹಯವಕ್ಕು ಬಾಳ್ವೆಯೆ-
ನ್ನಕ್ಕ ನೀನಿಲ್ಲದೊಡೆನಗೆ !

## ವೀರಘೋಷ

ಸಮಬಲ ಸಪತ್ನರುಪಟಳವ ಸಹಿಸುವನಾಗಿ
ದಹಿಸುವವನಾಗಿ ನೀನೆನ್ನ ಮಾಡು ;
ಅರಿಮಥನನೆನಿಸು, ಧನಪತಿಯಾಗಿಸೆನ್ನ ನೀಂ
ಜನವಂದ್ಯ ಜನಪಾಲನಾಗಿ ಮಾಡು !

ಅದೆ ನಾ ರಿಪುಕುಲಾಂತಕನಾದೆನಿಂದ್ರನೊಲು
ಅಕ್ಷತನರಿಷ್ಟನಹೊ ಲೋಕದೊಳಗೆ !
ಈ ವೈರಿಸಮುದಾಯ ಬಾಗಿ ನಿಂದಿದೆಯೀಗ
ರಾಯ ಜೀಯಯೆನುತ್ತ ಕಾಲಕೆಳಗೆ !

ನಿಮ್ಮ ಹುಟ್ಟಡಗಿಸುವೆನಿಲ್ಲೆ, ಬಗ್ಗಿಸಿ ಬಿಲ್ಲಿ-
ನೆರಡು ತುದಿಗಳ ಹಿಡಿವ ಹಗ್ಗದಂತೆ ;
ವಾಚಸ್ಪತಿಯೆ, ಇವರನೆನ್ನ ಕೆಳಗಡೆ ನಿಂತು
ಮಾತಾಡುವವರಾಗಿ ಮಾಡು ಮುಂತೆ !

ಬಂದೆನಿದೊ ವೀರಕರ್ಮವ್ಯಕ್ತ ತೇಜದಿಂ
ಬಂದೆನಿದೊ ಜಯಶಾಲಿಯಾಗಿ ಬಂದೆ;
ನಿಮ್ಮ ಮತಿ, ನಿಮ್ಮ ಕೃತಿ ನಿಮ್ಮ ಸಮಿತಿಗಳನ್ನು
ಹಿಡಿದೆನಿದೊ ಹಿಡಿದೆನೀಯೆಲ್ಲವಿಂದೆ !

ನಿಮ್ಮ ಯೋಗಕ್ಷೇಮಪಾಲನೆಯ ಹೊರೆಹೊತ್ತು
ನಿಂದ ನಾನುತ್ತಮೋತ್ತಮನು ನೋಡಿ,
ನಿಮ್ಮ ತಲೆಗಳ ಮೆಟ್ಟಿನಿಂದೆನಿದೊ ಮಾತಾಡಿ
ಕೆಳಗೆ ನಿಂದಿರ್ದು ಮೇಲ್ಮುಖವ ಮಾಡಿ ;

ಕೆಳನಿಂದು ಮೇಲೆ ಮುಖಮಾಡಿ ಮಾತಾಡಿರಿಂ-
ದೆನ್ನ ಕಲ್ಯಾಣತಿಯಿದರಿದು ನೋಡಿ:
ಕೆರೆಯ ಕಪ್ಪೆಗಳಂತೆ, ಕೆರೆಯ ಕಪ್ಪೆಗಳಂತೆ,
ಮಾತಾಡಬೇಕು ಮುಖ ಮೇಲುಮಾಡಿ!

(ಋಗ್ವೇದದ ೧೦ ನೆಯ ಮಂಡಲ, ೮ ನೆಯ ಅಷ್ಟಕದ 'ವೃಷಭಂ ಮಾ ಸಮಾನಾನಾಂ' ಎಂಬುದರ ಭಾಷಾನುವಾದ)

## ರಕ್ತರಹಿತ ಕ್ರಾಂತಿ

ಆವುದದು ಮುಗಿಲಂಚ ಬಗೆದು ಬಹ ಉಲ್ಕವೆನೆ
ಧಾವಿಸುತ ಬರುತಿಹುದು, ರಿಪುಗಳೆದೆ ಬಿರಿವಂತೆ
ಭೂವಳಯ ನಡುಗಿ ಜೀವಿಗಳು ದೆಸೆಗೆಡುವಂತೆ
ಮುಳಿದು ಖಣಿಖಣಿಲೆನ್ನುತ
ಸಾವುಸಾವೆಂದರಚುವಂತೆ ಕಾಕಸಮೂಹ
ರೀವಿಯಿಂದೆಯ್ತುಹುದು ಸತ್ಯವಾದಿಗಳ ಧೃಢ-
ಭಾವದಿಂ ಜಿಗಿದು ಹೊಳೆಹೊಳೆವುತ್ತ ಬಳುಕುತ್ತ-
ಲಾಹವದ ಬಯಲ ಬಳಿಗೆ!

ನಾಡ ಬಲ್ಗಂಡುಗಳ ನಾಡಿ ನಾಡಿಯ ಬೀರ
ಕೂಡಿ ಮೆಯ್ವೆತ್ತುದೋ, ದಾಸ್ಯಭಿತ್ತಿಯನೆತ್ತಿ
ದೂಡೆ ಮದವೃಷಭ ಕೋಡೆತ್ತಿದುದೊ, ಕೆರಳ್ದು ಹೂಂ-
ಕರಿಸಿ ದೆಸೆದೆಸೆಗೆ ಮಸಗಿ—
ಕಾಡಾನೆ ಕೆಷ್ಟದಿಂದೆದ್ದು ಬರಲೆಳಸಿ ಕರ
ನೀಡಿದುದೊ? ಎಂಬ ಸಂದೆಯುವ ಪ್ರಟ್ಟಿಸುಗುಮಿ
ನಾಡ ಪಲವೆಡೆಯ ಜನಸಂದಣಿಯ ಸನ್ನಣದ
ಕೂರಸಿಯದೇನೆಂಬೆನು!

ಆಳರಸರಧಿಕಾರಮುಂ ಕೈವರಿ ಕಿತ್ತು ಮುಂ-
ದಾಳ್ವರಸರಕ್ಕೆ ಜನಪದಮೊಂದು ಬೊಬ್ಬಿರಿದು

ಕಾಳಿಗವನೆಸಗುತಿದೆ ; ಪಿಂತಣಂತಲ್ಲ ಬಿಸಿ
ನೆತ್ತರನು ಬಸಿಯಿಸದಿದು—
ಜ್ವಾಳಾಮುಖಿಯ ಗಳದ ಕಿಚ್ಚಿ ಕೆಂಕಂ ರೂಹು-
ದಾಳಿ ಸತ್ಯದ ಬಿಚ್ಚುಗತ್ತಿಯಾಯ್ತೀಗಳೆನೆ
ಪಾಳಿಯಂ ಪೊರೆಯೆ ಮುನ್ನುಗ್ಗುತಿದೆ ಹರಿಚಕ್ರ-
ವೇಗಮಂ ಕಡೆಗಣಿಸುತ !

## ಹಚ್ಚುವೆ ತಾ ನಿನ್ನ ಹಣತಿಯ !

(ಸಾಂಗತ್ಯ)

ಹಚ್ಚುವೆ ತಾ ನಿನ್ನ ಹಣತಿಯನೆಲೆ ಗೆಳತಿ.
ಅಚ್ಚ ನೇಹವ ತುಂಬಿ ಕೊಡುವೆನು ಬಾ !
ನಿಚ್ಚ ನಿರ್ಮಲವಿಹ ನೇರುರಿಮಿಂಚಿನ
ಉಚ್ಚ ಜ್ಞಾನಜ್ಯೋತಿ ಹಿಡಿದಿಹೆ ಬಾ !

ಹೂವಾಗಿ ಅರಳಿಹೆ, ಹಣ್ಣಾಗಿ ಕಳಿತಿಹೆ,
ಗಿಣಿ ಬಾರೆ, ತುಂತುಂಬಿ ತುಂಬಿ ಬಾರೆ !
ಮಲ್ಲಿಗೆಯಾಗಿಹೆ, ಮಾಧುರ್ಯವಾಗಿಹೆ
ಭೋಗವತಿಯೆ ಬಂದು ನೋಡಿಲ್ಲಿ ಬಾ !

ರಸಗಂಗೆಯಾಗಿ ಈಯೆಡೆ ಹರಿಯುತ್ತಿದೆ,
ಹೊಸ ದೇವತೆಯೆ ಬಂದು ಮೀಯಿಲ್ಲಿ ಬಾ !
ಹಸಿರು ಮನದ ಮೈದಾನದಿ ವಿಹರಿಸು,
ಜಸವೆಣ್ಣೆ ಕಸವರವೇಕಿಲ್ಲಿ ಬಾ !

ಬಿಗುವಿಲ್ಲ, ಲಗುವೆಲ್ಲ, ಹಗರಣವಿಲ್ಲಿಲ್ಲ,
ಸೊಗಯಿಸುವೊಲುಮೆಯ ಮಂಟಪದಿ-
ಹೊಗಬಾರೆ ಮೈದೋರೆ, ಮಮತೆಯ ಮಾಸತಿ,
ಜಗ ಕಾಣದಿರುವಂಥ ಜಯರಂಗದಿ !

ಮರುಳುಗೊಳಿಸುವಂಥ ಹುಸಿವೆಡಗಿಲ್ಲಿಲ್ಲ,
ಕಪಟಾಭಿನಯನೇತ್ರದುರಿಮಿಂಚಿಲ್ಲ,
ಹರಳುಂಗುರವ ತೋರಿ ಮೋಸಮಾಡುವದಿಲ್ಲ,
ಒಲಿದರಿವಿನ ಮೋದ ಮನಮೈಯೆಲ್ಲ !

ಪೊಳ್ಳು ನಾಚಿಕೆಯಿಲ್ಲ, ಸುಳ್ಳು ಸಂಭ್ರಮವಿಲ್ಲ,
ಕಳ್ಳ ಮನದ ಕುಡಿನೋಟವಿಲ್ಲ ;
ಜೊಳ್ಳು ಸಿಂಗಾರದ ಸಿರಿವಂತಿಕೆಯ ರೀವಿ
ಇಲ್ಲಿಲ್ಲ—ತಿಳಿವಿನ ಚೆಲುವೆಲ್ಲ !

ಮುಚ್ಚಿ ತೆರೆವ ಮಾಯೆ ಮಾಟಗಳಿಲ್ಲಿಲ್ಲ,
ನೆಚ್ಚದೆ ನೆಚ್ಚಿಸುವರೆಮಾತಿಲ್ಲ ;
ಹುಚ್ಚಂಜಿಕೆಯ ತೋರುವರಸಿಕ ನಡೆಯಿಲ್ಲ,
ಹಚ್ಚಿದ ದೀಪದ ಪ್ರಭೆಯೆಲ್ಲ !

ಹಚ್ಚುವೆ ತಾ ನಿನ್ನ ಹಣತಿಯನೆಲೆ ಗೆಳತಿ,
ನೆಚ್ಚಿಕೆ ನೇಹವ ತುಂಬಿ ನನ್ನ
ಹೊಚ್ಚ ಹೊಸ ಪ್ರಭೆ ಬೀರುವ ನೀಳುರಿ-
ಯುಚ್ಚ ಜ್ಞಾನದ ನಂದಾದೀಪದಿಂದ !

## ನನ್ನ ತಪ

ನನಗಾಗಿ—ನನ್ನ ನಯನೋತ್ಸವದ ಸಲುವಾಗಿ—
ನವಚೂತಪಲ್ಲವವ ಚಿವುಟಿದೆನೆ ಹಾ !
ಕೆನೆವಾಲು ಘನವಾಗಿ ಮೆಯ್ವೆತ್ತಹಾಗಿರುವ
ಎಳಮಲ್ಲಿಗೆಯ ಮುಗುಳ ಕೊಯ್ದೆನೇನು !

ನನ್ನ ಮೈಗಿಂಪಾಗಲೆಂದು ಚಂದನಲತೆಯ
ಮುರಿದು ತಂದೆನೆ, ನನ್ನ ಮೂಗಿಗಾಗಿ
ಚಿನ್ನದಂತಿರುವ ಚಂಪಕವ ಕಿತ್ತಾರಯ್ದು
ಮಣ್ಣುಬಣ್ಣಕೆ ತಂದು ನಿಲ್ಲಿಸಿದೆನೆ !

ನಾಲಗೆಯು ನಲುಮೆಯುನು ಬೆಳೆಸಬಗೆದೆಳಗಬ್ಬ
ಸೀಳಿದೆನೆ, ಕೆಯ್‌ಹೊಡೆಯು ಸೆಳೆದು ಚೀಪಿ,
ಹಾಳುಗೈದೆನೆ ಮುಂದೆ ಪೂರ್ಣವಾಗುವ ಫಲವ,
ಬೀಳುಗಳೆದೆನೆ ಅನ್ಯರಳಿಪನಕಟ!

ನನಗೆ ಕರ್ಣಾಮೃತವದೆಂದು ತಿಳಿದೋರಂತೆ
ಬಿನದದೊಂದರೆಮಾಯೆಯಿಂದ ಮುಸಗಿ
ನನೆಯ ಹನಿಯಂತಿರುವ ನಿರ್ಮಲಾಂತಃಕರಣ-
ದೆಳಗೂಸುಗಳ ನುಡಿಸಿ ದಣಿಸಿರುವೆನೆ!

ನನ್ನ ಬಗೆ ಬಗೆಗೊಳಲಿ, ನನ್ನ ನಗೆ ಮಿಗೆ ಮಿನುಗ-
ಲೆನ್ನೊಡಲು ಸುಖಿಸಲೆಂಬಾಶೆಯಿಂದ—
ಅನ್ಯವನು ಹಿಂಸಿಸಿದೆನರರೆ, ನನಗೆಂದು ನಾ
ಬ್ರಹ್ಮವನೆ ಹರಿದು ಹಂಚಲು ಹೋದೆನೆ!

ನನ್ನದಲ್ಲದುದಿಲ್ಲವೆನ್ನುವರಿವಿರದೆ, 'ಓ
ನನ್ನದದು ನನ್ನದಿದು' ಎಂದು ಕೂಗಿ,
ಬನ್ನಬಟ್ಟೆನು ಬನ್ನಬಡಿಸಿ ಬಡ ಜೀವಿಗಳ
ಕಣ್ಣೊಳಗೆ ಕೈಯಿಟ್ಟು ಕಾಣದಾಗಿ!

## ಉಪವಾಸ

ಬಂದಿತೋ ಬಂದಿತುಪವಾಸ
ಬಡವರಿಗೆ ತ್ರಾಸ,
ಮಾಡಲುಪಹಾಸ
ಯಮನಿಗುಲ್ಲಾಸ! ॥ ಪಲ್ಲ ॥

ಉಪವಾಸ ಬಂತು ವನವಾಸ ಬಂತು—ಬಂತು;
ಮಿಡುಕಾಡಹತ್ತಿತೀ ಜಗದ ಜೀವತಂತು;
ಅನ್ನಕ್ಕೆ ಬಂತು ಬ್ರಹ್ಮತ್ವವೆಂಬುದಿಂತು:
ಬೇಕಾದ ವಸ್ತು ಬೆಲೆಯೇರಿ ದೂರ ಸಂತು!

ಸಾವಿಂಗೆ ಸರಸ ಬಂತು,
ನಕ್ಕೊಮ್ಮೆ ಹೇಳಿತಿಂತು:
"ಕೊಡಿರಿಂದು ನನ್ನ ಕಂತು"
ಎಂದೆದ್ದು ಕಳುಹಲಿಂತು—

ಕೈಲಾಸಗಿರಿಯಿನಿತ್ತಿತ್ತ ಬೀಸಿ ಬಂದಿತ್ತು,
ಹಾಸಿಬಂದಿತ್ತು, ಒತ್ತಿಬಂದಿತ್ತು, ಮುತ್ತಿಬಂದಿತ್ತು,
ಮುನಿದು ಬಂದಿತ್ತು—ಬಂದಿತುಪವಾಸ!

ಕಣ್ಣು ಬೆಳ್ಪುಗೂಡಿತ್ತು, ಮೋರೆ ಬಾಡಿತ್ತು,
ಕಾಲು ಕುಸಿದಿತ್ತು, ಕರುಳು ಹೊಸೆದಿತ್ತು,
ಕ್ಷುದ್ಬಾಧೆ ಜೀವ ಹಿಸುಕಿತ್ತೋ—ಜೀವ ಹಿಸುಕಿತ್ತು!

ವಂಗಕ್ಕೆ ಬಂತು, ಅಂಗಕ್ಕೆ ಬಂತು,
ಅಂಗಾಂಗಕ್ಕೆ ಬಂತು,
ನರನರಗೆ ಬಂತು ನರನರಕೆ ಬಂತು
ಬಸಿರಾಳ ಕಂಡುಬಂತೋ—
ಬಂದಿತುಪವಾಸ!

ಉಪವಾಸ ಬಂತು, ವನವಾಸ ಬಂತು—ಬಂತು;
ಮಿಡುಕಾಡಹತ್ತೀತೀ ಜಗದ ಜೀವತಂತು!
ಉಳಿಗಾಲ ಸಂತು ಅಳಿಗಾಲ ಬಂತು ಆಕಟಾ,
ಮೃತ್ಯುವಿನ ಮೋರೆ ಕಾಣಿಸಿತು ಉಗ್ರ. ವಿಕಟಾ!

ಪ್ರಾಣವನು ಮಿಡುಮಿಡುಕಿಸುತ್ತ ಬಂತು.
ತ್ರಾಣವನು ತುಡುತುಡುಕಿ ಬಂತು,

ಚಿತ್ತಾಪ ತಂತು, ಹೃತ್ತಾಪ ತಂತು,
ಸಂತಾಪರಾಶಿ ತಂತು!

ಜ್ವರತಾಪ ತಂತು, ಹರಶಾಪ ತಂತು,
ಯಮಚಾಪವೆತ್ತಿತಿಂತು!

ಹಸಿವ ಹಚ್ಚಿ ಹೊಟ್ಟೆಂಬ ಲಂಕೆಯನು
ಸುಟ್ಟೀ ಬಂತು;

ಹಸುಳೆಯೊಂದು ಬಿಡದೊಂದು ಜೀವವನು
ತಿಂದೇ ತಿಂತು !
ಕೆಂಡಕೆಂಡ ಕಾರುತ್ತ ಬಂತು, ಹೋರುತ್ತ ಬಂತು,
ಬಂತೋ ಬಂತು !
ಕಂಡಕಂಡವರ ಹಿಂಡಿಹಿಂಡಿ ಹೀರುತ್ತ ಬಂತು,
ಬಂತೋ ಬಂತು—
ಬಂದಿತುಪವಾಸ !

ಉಪವಾಸ ಬಂತು, ವನವಾಸ ಬಂತು——ಬಂತು
ಮಿಡುಕಾಡಹತ್ತಿತೀ ಜಗದ ಜೀವತಂತು !
ಹೊರೆವವರು ಹೊರಗೆ ನಿಂತದ್ದು ಆಯ್ತು ಪ್ರಕಟಾ ;
ದಾಸ್ಯಕ್ಕೆ ದೊರೆಯಿತು ಪೈಶುನ್ಯವಜ್ರಮುಕುಟಾ !
ಪ್ರೀತಿಯನು ಕೊಂದು ಭೀತಿಯನು ತಂದು
ನೀತಿಯನು ಬಿಟ್ಟು ಖಾತಿಯನು ತೊಟ್ಟು—
ಮುದುಕರನು ಮುರಿದು, ಹುಡುಗರನು ತರಿದು,
ಹೆಂಗಳೆಯರನ್ನು ಹಿಳಿದು—
ಮಕ್ಕಳನು ಮುಗಿಸಿ, ಮಾರಿಯನು ನಗಿಸಿ,
ರಣಹದ್ದಿನಂತೆ ಸುಳಿದು—
ಧನದರ್ಪವಾಜಿಯನು ಹತ್ತಿ, ಹೆಣವ ಮುಂದೊತ್ತಿ
ಬಡವರನು ಮುತ್ತಿ ರೋಗ-ರುಜೆ ಬತ್ತಿ
ದೇಶವನು ಸುತ್ತಿ—ಬಂದಿತುಪವಾಸ !
ಕೋಟ್ಯಧಿಕಮಾನವರ ಸುಟ್ಟು, ಕೆರಳಿ ಕಣ್ಬಿಟ್ಟು,
ಘಾತದುಡೆಯುಟ್ಟು, ಘರದಿನಡಿಯಿಟ್ಟು,
ದಯೆಯನು ದೂರಿಟ್ಟು—ಬಂದಿತುಪವಾಸ !

ಅಕೋ ಅಲ್ಲಿ ಬಂತು, ಇಕೋ ಇಲ್ಲಿ ಬಂತು, ಮಲಬಾರಿನಲ್ಲಿ ಬಂತು !
ಪ್ರಕಟವಾಗಿ ಬಂತು; ಬಕವಾಗಿ ಬಂತು, ಬಂದಲ್ಲಿ ಬಂತು, ಬಂತೋ
ಬಂದಿತುಪವಾಸ !

# ಅಮೃತಬಿಂದು

ಶಾಂತ ದಾಂತ ಸುಗುಣಾಭರಣನ ಹೃ -
ತ್ಕಮಲಮೂಲದಿಂದ
ಸಾಂತ್ವನಕ್ಕೆ ದುಃಖಿಗಳ ತಾನೆ ತಾ -
ನುಕ್ಕಿ ದೀಪ್ತಿಯಿಂದ —
ಹಾಲುಗಡಲ ಹೆದ್ದೆರೆಯು ಹಾಗೆ ಮುಗಿ-
ಲಂಚ ಮುಟ್ಟಿ ನಿಂದು
ಬಾಳ ಬೆಳಗಬಹ ಕರುಣವಕ್ಕು ತಾ-
ನಮೃತಬಿಂದುವೊಂದು !

ಮಲ್ಲಿಕಾವನದ ಮೊಲ್ಲೆಯೊಂದು ಬೆಳ-
ಗ್ಗೊಪ್ಪವನ್ನು ತಂದ,
ಒಲ್ಮೆ ಸೂಸಿ ಮೊಗವೆತ್ತಿ ತಾನೆ ತಾ-
ಯ್ವಳ್ಳಿ ಮಗ್ಗುಲಿಂದ
ಎಲ್ಲ ಲೋಕದಾರಾಧ್ಯಮೂರ್ತಿ ರವಿ
ಬಂದನೆಂದು ಹಿಗ್ಗಿ
ಚೆಲ್ವ ಮಧುವದೊಂದಮೃತಬಿಂದುವೆದೆ-
ದುಂಬಿ ಹೊರಗೆ ನುಗ್ಗಿ !

ಬ್ರಹ್ಮಪಟ್ಟದಲಿ ಕುಳಿತು ಸೃಷ್ಟಿಯಲಿ
ಕಂಡ ಕೊರತೆಗಳನು,
ಬ್ರಹ್ಮನೇತಕಿಂತೆಸಗಿಬಿಟ್ಟೆ ಚಿಃ
ತಾಳಲಾರೆನಿದನು—
ಅಲ್ಲ ಹೀಗೆಯೆಂದೊಲುಮೆಗುಂಚದಿಂ-
ದಿಳೆಯುತಿದ್ದಲೇಳೆ
ಚೆಲ್ಲಿ ಹರಿವ ಕವಿಮನದ ನಲ್ಮೆಯೊಂ-
ದಮೃತಬಿಂದು ಕೇಳೆ !

— ಜಯ ಹಿಂದ —

# ಮೇಘನಾದ

'ಮೇಘನಾದ' ಕವಿಯ ಹಿಂದಿನ ಕೃತಿ. ಇದರಲ್ಲಿ ಹಲವಾರು ಸುಂದರ ಕವನಗಳಿವೆ. ಈ ಸಂಗ್ರಹದ ಬಗ್ಗೆ 'ಜೀವನ'ದಲ್ಲಿ– "ಕವಿ ಹೃದಯದಿಂದ ಗೆಳೆತನ ಕುರಿತು ಎರಡು ಮೂರು ಹೃದಯಸ್ಪರ್ಶಿಯಾದ ಕವನಗಳು ಹೊರಹೊಮ್ಮಿವೆ. . . . ವಿರಹದಿಂದ ಬೆಂದ 'ಭರತಮಾತೆ'ಯ ಚಿತ್ರ ಚೆನ್ನಾಗಿ ಮೂಡಿದೆ. 'ಬೆಟ್ಟಕುಳಿ' ಮತ್ತು 'ಶರತ್ಕಾಲ' ಎಂಬೆರಡು ಕವನಗಳಲ್ಲಿ ನಾಡಿನ ಪ್ರಕೃತಿಯ ಸೊಬಗನ್ನು ಕಂಡ ಆನಂದಾನುಭವ ರಮ್ಯವಾಗಿ ವ್ಯಕ್ತಗೊಂಡಿದೆ' ಎಂದು ಹೇಳಿದೆ.

'ಸುಬೋಧ'ದಲ್ಲಿ— "ಶ್ರೀ. ಬಿ. ಎಚ್. ಶ್ರೀಧರ ಇವರ ಕವಿತೆಗಳು ಭಾವರಸಗರ್ಭಿತವಾಗಿ ಅಧುನಿಕ ಕವಿತೆಗಳ ಸಮೂಹದಲ್ಲಿ ಮೇಲ್ಮಟ್ಟದಲ್ಲಿ ಶೋಭಿಸಲರ್ಹವಾದವು . . . ಎಲ್ಲವೂ ನೂತನಭಾವಪೂರಿತವಾಗಿವೆಯಾದರೂ 'ಹೃದಯಪರೀಕ್ಷೆ', 'ಧೀರ', 'ಅನುಭವ', 'ಕನ್ನಡಿಗನ ಕೂಗು', 'ಯುದ್ಧಾಯ ಯುಂಜ್ಯಸ್ವ', 'ವಿಗ್ರಹ ಭೇದನ', 'ಭರತಮಾತೆ', 'ಮಿತ್ರನಿಗೆ ಪತ್ರ' ಈ ಕೆಲವು ಕವಿತೆಗಳಲ್ಲಿ ಅವರು ವ್ಯಕ್ತಪಡಿಸಿರುವ ಅರ್ಥ ಮತ್ತು ಭಾವಗಳು ಹೃದಯಾಕರ್ಷಕವಾಗಿವೆ" ಎಂದು ಪ್ರಕಟವಾಗಿದೆ.

